# ಕನ್ನಡ ಆದಿತ್ಯ ಪುರಾಣಂ




ಸಂಗ್ರಾಹಕರು:

**ಶ್ರೀ ಕೆ. ವೆಂಕಟರಾಯಾಚಾರ್ಯರು**

(ಮಾಸ್ತರ್, ಕುಳಾಯಿ, ದಕ್ಷಿಣ ಕನ್ನಡ ಜಿಲ್ಲಾ)





ಸಂಪಾದಕರು ಮತ್ತು ಪ್ರಕಾಶಕರು:

**ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ**

**ಬಿ. ಶಿವಮೂರ್ತಿ ಶಾಸ್ತ್ರಿಗಳು**

ಬೆಂಗಳೂರು.

೧೯೫೧

ಬೆಲೆ: ೧-೦-೦

# ಪ್ರಕಾಶಕರ ವಿನಂತಿ

'ಕನ್ನಡ ಆದಿತ್ಯ ಪುರಾಣಂ' ಎಂಬ ಈ ಗ್ರಂಥದ ೧ನೆಯ ಭಾಗವನ್ನು ನಮ್ಮ ಗ್ರಂಥಮಾಲೆಯ ೧೩ನೇ ವಾಙ್ಮಯ ಕಾಣಿಕೆಯಾಗಿ ಮಹಾಜನರಿಗೆ ಒಪ್ಪಿಸಲು ಸಂತೋಷವಾಗುತ್ತದೆ. ಈ ಪ್ರಾಚೀನ ಪದ್ಯಕಾವ್ಯವು ಇದುವರೆಗೆ ಪ್ರಕಟವಾಗದಿದ್ದು ಈಗ ತಾನೇ ಬೆಳಕಿಗೆ ಬಂದಿದೆಯೆಂಬುದೂ, ಅದರಲ್ಲಿಯೂ ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ಈ ಅಪೂರ್ವ ಗ್ರಂಥ ಪ್ರಕಾಶಕ್ಕೆ ಬಂದಿತೆಂಬುದೂ ನಾವು ಹೆಮ್ಮೆಪಡತಕ್ಕ ಸಂಗತಿಯಾಗಿದೆ. ಈ ಗ್ರಂಥದ ಮತ್ತುಳಿದ ಎರಡು ಭಾಗಗಳನ್ನೂ ಆದಷ್ಟು ಬೇಗ ಪ್ರಕಟಿಸಬೇಕೆಂಬುದು ನಮ್ಮ ಬಲವಾದ ಹೃದ್ಗತ.

ಅಪೂರ್ವವಾದ ಈ ಗ್ರಂಥವನ್ನು ಶರಣ ಸಾಹಿತ್ಯ ಕಾರ್ಯಾಲಯದ ಹಿತಚಿಂತಕರಾದ ಶ್ರೀ **ಕೆ. ವೆಂಕಟರಾಯಾಚಾರ್ಯರು** ಶ್ರಮಪಟ್ಟು ಸಂಗ್ರಹಿಸಿಕೊಟ್ಟು ನಮಗೆ ಉಪಕಾರ ಮಾಡಿದ್ದಾರೆ. ಅನಿಮಿತ್ತ ಬಂಧುಗಳಾದ ಅವರ ಈ ಉಪಕಾರವನ್ನು ನಾವು ಎಷ್ಟು ಕೊಂಡಾಡಿದರೂ ಸಾಲದಾಗಿದೆ.

ಈ ಕಾವ್ಯವು ಒಂದೇ ತಾಳೆಯೋಲೆಯ ಸಹಾಯದಿಂದ ಸಂಗ್ರಹಿಸಲ್ಪಟ್ಟಿದ್ದರಿಂದಲೂ, ಶರಣ ಸಾಹಿತ್ಯ ಮಾಸಿಕದಲ್ಲಿ ಬೇರೆ ಬೇರೆ ಕಾಲದಲ್ಲಿ ಅಚ್ಚಾದುದರಿಂದಲೂ ಇದರಲ್ಲಿ ಲೇಖನ ದೋಷಗಳೂ, ಮುದ್ರಣ ದೋಷಗಳೂ ಉಳಿದಿವೆ. ಕಡೆಯಲ್ಲಿ 'ತಪ್ಪು ಒಪ್ಪು' ಕೊಡಲಾಗಿದೆ. ಇವನ್ನೆಲ್ಲಾ ಮುಂದಣ ಮುದ್ರಣದಲ್ಲಿ ಸರಿಪಡಿಸುವೆವು.

ಈ ಗ್ರಂಥವನ್ನು ಓದುವ ವಾಚಕರ ಸೌಕರ್ಯಕ್ಕಾಗಿ ಗ್ರಂಥದ ಮೊದಲು ಕವಿ ಕಾವ್ಯ ವಿಚಾರವನ್ನೂ, ಕಡೆಯಲ್ಲಿ ಕಠಿಣ ಶಬ್ದಗಳ ಅರ್ಥವನ್ನೂ ಅಂತೆಯೇ ಅಚ್ಚಿನ ದೋಷಗಳ ತಿದ್ದುಪಡಿಯನ್ನೂ ಕೊಡಲಾಗಿದೆ.

ಕರ್ಣಾಟಕದ ಪ್ರಾಚೀನ ಗ್ರಂಥಗಳಾದ ಶಬ್ದಾನುಶಾಸನ ಪ್ರಕಾಶಿಕಾ, ಕಾವ್ಯಾವಲೋಕನಂ, ಚೆನ್ನಬಸವ ಪುರಾಣಂ, ಶಬರ ಶಂಕರ ವಿಳಾಸಂ, ಪ್ರಭುಲಿಂಗ ಲೀಲೆ, ಬಸವೇಶ್ವರ ವಚನಗಳು, ಕೈವಲ್ಯ ಕಲ್ಪವಲ್ಲರಿ, ಶಬ್ದಮಣಿ ದರ್ಪಣಂ, ಬಸವ ಪುರಾಣಂ ಮೊದಲಾದ ಮಹತ್ವದ ಗ್ರಂಥಗಳನ್ನು ಶುದ್ಧವಾಗಿಯೂ, ಸುಂದರವಾಗಿಯೂ ಸಂಪಾದಿಸಿ ಪ್ರಕಟಿಸುವುದಕ್ಕಾಗಿಯೇ ತಮ್ಮ ಆಯುಷ್ಯವನ್ನು ಮೀಸಲು ಮಾಡಿ ತಾ॥ ೨೨-೧೨-೧೯೫೧ರಂದು ಧಾರವಾಡದಲ್ಲಿ ಶಿವೈಕ್ಯರಾದ ಜಯಕರ್ಣಾಟಕ ಸಂಪಾದಕರಾದ **ಪ್ರೊ॥ ಎಸ್. ಎಸ್. ಬಸವನಾಳರ** ಪವಿತ್ರಾತ್ಮನಿಗೆ ಈ ಗ್ರಂಥವನ್ನು ಕಾಣಿಕೆಯಾಗಿ ಸಮರ್ಪಣ ಮಾಡಲಾಗಿದೆ. ಕನ್ನಡ ನಾಡು ನುಡಿಗಳ ಅಭಿಮಾನಿಗಳು ಎಂದಿನಂತೆ ನಮ್ಮ ಈ ಪ್ರಕಟನೆಗೂ ಪ್ರೋತ್ಸಾಹವೀಯುವರೆಂದು ನಂಬಲಾಗಿದೆ.

ತಾ॥ ೩೧-೧೨-೧೯೫೧ ಇಂತು,

ಬೆಂಗಳೂರು-೨. **ಎಚ್. ಎಸ್. ರೇಣುಕ ಪ್ರಸಾದ್ ಬಿ.ಎ.,**

'ಉಪ ಸಂಪಾದಕ' ಶರಣ ಸಾಹಿತ್ಯ ಗ್ರಂಥಮಾಲಾ.

## ವಿಷಯ ಸೂಚಿಕೆ

# ಸಂಗ್ರಾಹಕರ ಬಿನ್ನಹ

ಸಂಸ್ಕೃತ ಹಾಗೂ ಕನ್ನಡ ಗ್ರಂಥಗಳಲ್ಲಿ ಅದೊವ್ಮ್ಮೆಯಾದರೂ .ಅಚ್ಚಾಗಧ ಹಲವು ಉತ್ತಮ ಕೃತಿಗಳಿವೆಯೆಂದು ಆಯಾ ಕವಿಚರಿತ್ರೆಗಳಿಂದ ತಿಳಿಯುತ್ತದೆ. ಪ್ರಕೃತದ 'ಕನ್ನಡ ಆದಿತ್ಯಪುರಾಣ'ದ ತಾಳೆಯೋಲೆಯ ಪ್ರತಿಯನ್ನು ಶ್ರೀ ವೆಂಕಟರಮಣ ಹೊಳ್ಳರಿಂದ ಒದಗಿಸಿಕೊಂಡಿದೆ. ಇದನ್ನು ಸಂಪ್ರತಿಸುವಾಗೆಲ್ಲಾ ತೆರದ ಸೂಚನೆಗಳನ್ನಿತ್ತವರು ಶ್ರೀ ಎಂ. ವಾಸುದೇವರಾವ್ ಎಂ. ಎ., ಎಲ್. ಡಿ. ಹೆಡ್‌ಮಾಸ್ಟರು, ಹೈಸ್ಕೂಲು, ಸುರತ್ಕಲ್ ಅವರು.

ಇದರ ಪ್ರಯೋಜನವು ಜನತೆಗಾಗಲೆಂದಾಶಿಸಿ ಪ್ರಕಟಸಿದವರು ಶರಣ ಸಾಹಿತ್ಯ ಮಾಸಪತ್ರಿಕೆ ಹಾಗೂ ಗ್ರಂಥಮಾಲೆಯಲ್ಲಿ ಇದುಂಗಲೇ ಹಲವಾರು ಕೃತಿರತ್ನಗಳನ್ನು ಪ್ರಕಾಶಗೊಳಿಸಿದವರಾದ ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ ವೇ|| ಬ. ಶಿವಮೂರ್ತಿಶಾಸ್ತ್ರಿಗಳವರು. ಈ ಮಹನೀಯರಿಗೆ ಈ ಸಂದರ್ಭದಲ್ಲಿ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುವುದು ತಕ್ಕುದಾಗಿದೆ.

ಈ ಗ್ರಂಥಕ್ಕೆ ಪರಿಚಾಯಕವಾಗಿ ಶರಣ ಸಾಹಿತ್ಯದಲ್ಲಿ ಪ್ರಕಟವಾದ ಶ್ರೀ ಶಾಸ್ತ್ರಿಗಳವರ ಲೇಖನವನ್ನೂ (ಸಂಪುಟ ೧೪. ಸಂ. ೬.)ಅದೇ ಪತ್ರಿಕೆಯಲ್ಲಿ ಆ ಮೊದಲು ಪ್ರಕಟಿತವಾದ ನನ್ನದೊಂದು ಬರೆಹವನ್ನೂ (ಸಂಪುಟ ೧೩. ಸಂ. ೨) ಓದಬಹುದಾಗಿದೆ. ಅದರೊಂದಿಗೆ, ಗ್ರಂಥದ ಬಾಹ್ಯ ಆಂತರಿಕ ಸಂಗತಿಗಳಾಗಿರುವುವೆಂದರೆ ಕನ್ನಡ ಕವಿಚರಿತೆಯ ಮೂರನೆಯ ಸಂಪುಟದಲ್ಲಿ ಸೂಚಿಸಿದ ಆದಿತ್ಯಪುರಾಣದ ಇನ್ನೊಂದು ಪ್ರತಿಯಲ್ಲಿ ೨೬೬೪ ಪದ್ಯಗಳಿವೆಯೆಂಬ ಪ್ರತಿಗಿಂತಲೂ ಈ ನಮ್ಮ ಪ್ರತಿಯು ಭಿನ್ನವಿದೆ. ಹಾಗೂ ಸಂಧಿ ಹದಿನಾರರಲ್ಲಿಯ ಕಥೆಯೊಂದನ್ನು (ಪದ್ಯ ೧೦, ೧೩) ನೋಡಿದರೆ ವೀರಶೈವ ಮಹಾಪುರುಷರ ಕಥೆಗಳನ್ನು ಅಳವಡಿಸಿ ಹಲವಾರು ಕೃತಿರತ್ನಗಳನ್ನು ರಚಿಸಿದ ಕವಿಗಳಂತೆ ಈ ಕವಿಯು ಕಾಲದ ಘಟನೆಯೊಂದನ್ನು ಪೌರಾಣಿಕ ರೀತಿಯಿಂದ ವರ್ಣಿಸಿರಬಹುದೇನೋ ಅನ್ನಿಸುತ್ತದೆ! ಇನ್ನೂ ಹೆಚ್ಚಿನ ವಿಷಯಾಂಶಗಳನ್ನು ಮುಂದಿನ ಭಾಗದವಸರದಲ್ಲಿ ಸೂಚಿಸುವೆವು. ಇದು ಮಾತ್ರವಲ್ಲ, ಈ ಕವಿಯ ಕಾಲ, ದೇಶ, ಮತಗಳ ಕುರಿತು ವಿವೇಚಿಸಲು ತಜ್ಞರ ಪಾಲಿಗೆ ಒಪ್ಪಿಸುವೆವು. ಇದರಂತೆ ಈ ಪುರಾಣದ ಮುಂದಿನ ಭಾಗಗಳು ವಾಚಕರ ಕೈಯ್ಯಲ್ಲಿ ಕ್ರಮಶಃ ನೀಡುವೆವೆಂದೂ ಭರವಸೆಯಲ್ಲಿದ್ದೇವೆ. ಹಾಗಾಗಲೆಂದು ಶ್ರೀ ದೇವರನ್ನು ಪ್ರಾರ್ಥಿಸುವೆನು.

ಇನ್ನು ಇದರಂತೆ ಅಮುದ್ರಿತವಾದ ನಾರಾಯಣ ಕವಿಯ 'ಉತ್ತರ ರಾಮಕಥೆ'ಯ ಓಲೆಯುಗರಿಯ ಪ್ರತಿಯೊಂದು ಇತ್ತಲಾಗಿ ಸಿಕ್ಕಿದೆ. ಅದನ್ನೂ ಇದೇ ತೆರವಾಗಿ

ಪ್ರಕಟಿಸಬೇಕೆಂಬಾಸೆಯಿದೆ. ಶ್ರೀ ಶರಣ ಸಾಹಿತ್ಯದ ಸಂಪಾದಕ ಮಹಾಶಯರೂ ಉದಾರವಾಚಕರೂ ತಮ್ಮ ಸಹಕಾರವನ್ನು ನೀಡಲಿಯೆಂದು ಈಯವಸರದಲ್ಲಿ ಅರಿಕೆ ಮಾಡುವೆವು. ತಥಾಸ್ತು !

ಈ ಹೊತ್ತಗೆಯನ್ನು ಸುಂದರವಾಗಿ ಮುದ್ರಿಸಿದ ಸ್ವತಂತ್ರ ಕರ್ಣಾಟಕ ಅಚ್ಚು ಕೂಟದ ವ್ಯವಸ್ಥಾಪಕರಿಗೆ ಹಾಗೂ ಗೆಳೆಯರೆಲ್ಲರಿಗೆ ನನ್ನ ಉಪಕಾರಸ್ಮರಣೆ ಸಲ್ಲ ಬೇಕು.

ಮಿತಿ, ದೀಪಾವಳಿ ಹಬ್ಬ
ಶ್ರೀ ಖರನಾಮ ಸಂವತ್ಸರ

ಕೆ. ವೆಂಕಟರಾಯಾಚಾರ್ಯ,
ಸುರತ್ಕಲ್.(ದಕ್ಷಿಣ ಕನ್ನಡ)

# ಕನ್ನಡ ಆದಿತ್ಯ ಪುರಾಣಂ

## ಕವಿ ಕಾವ್ಯ ವಿಚಾರ

'ಕನ್ನಡ ಆದಿತ್ಯಪುರಾಣಂ'ಎಂಬ ಈ ಪ್ರಾಚೀನ ಗ್ರಂಥದ ಪ್ರಥಮ ಭಾಗವನ್ನು ನಮ್ಮ ಸಹೃದಯ ವಾಚಕರಿಗೆ ಸಮರ್ಪಿಸಲು ನಮಗೆ ಅವಕಾಶ ಪ್ರಾಪ್ತವಾದುದಕ್ಕಾಗಿ ಸಂತೋಷವುಂಟಾಗಿದೆ. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಏಳಿಗೆಯ ದೃಷ್ಟಿಯಿಂದ ಇದುವರೆವಿಗೆ ಪ್ರಕಟವಾಗದಿರುವ ಪ್ರಾಚೀನ ಕನ್ನಡ ಗ್ರಂಥಗಳನ್ನು ಸಂಗ್ರಹಿಸಿ ಪ್ರಕಟಿಸುವುದು ಆಗತ್ಯವಾದ ಹಾಗೂ ಉಪಯುಕ್ತವಾದ ಕಾರ್ಯವೆಂಬ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿರಲಾರದು.

ಪ್ರಕೃತ ನಾವು ಪ್ರಕಟಿಸಿರುವ ಈ ಪುರಾಣವು ದಕ್ಷಿಣ ಕನ್ನಡ ಜಿಲ್ಲಾ ಪಣಂಬೂರಿನಲ್ಲಿರುವ ಬ್ರಹ್ಮಶ್ರೀ॥ ವೆಂಕಟರಮಣ ಹೊಳ್ಳರು ಕುಡಂಬೂರು ಇವರ ಪ್ರಾಚೀನ ಗ್ರಂಥ ಸಂಗ್ರಹದಲ್ಲಿ ಸಿಕ್ಕಿದುದು. ತಾಳೆಯೋಲೆಯಲ್ಲಿರುವ ಈ ಗ್ರಂಥವನ್ನು ಶರಣ ಸಾಹಿತ್ಯ ಮಾಸಿಕದ ಉಜ್ವಲಾಭಿಮಾನಿಗಳಾದ ದಕ್ಷಿಣ ಕನ್ನಡ ಜಿಲ್ಲಾ ಕುಳಾಯಿ ಗ್ರಾಮದ ಮಾಸ್ತರು ಶ್ರೀ ಕೆ. ವೆಂಕಟರಾಯಾಚಾರ್ಯರು ಶ್ರಮಪಟ್ಟು ಸಂಗ್ರಹಿಸಿ ಕನ್ನಡ ಸಾಹಿತ್ಯದ ಮೇಲಣ ಅಭಿಮಾನದಿಂದ ನಮಗೆ ಪ್ರಕಟಣೆಗಾಗಿ ಕಳುಹಿಸಿ ಕೊಟ್ಟರು. ಈ ಮಹನೀಯರ ಉಪಕಾರಕ್ಕಾಗಿ ನಾವು ಅವರಿಗೆ ನಮ್ಮ ಕೃತಜ್ಞತಾಪೂರ್ಣವಾದ ವಂದನೆಗಳನ್ನು ಸಮರ್ಪಿಸುವುದು ಆಗತ್ಯವಾಗಿದೆ.

ಈ ಗ್ರಂಥಕ್ಕೆ 'ಕನ್ನಡ ಆದಿತ್ಯ ಪುರಾಣಂ' ಎಂಬ ಹೆಸರೇ ಅಲ್ಲದೆ'ಶಿವ ಕಥಾಮೃತವೆಂಬ ಶಿವಕಾವ್ಯ' ಎನ್ನುವ ಇನ್ನೊಂದು ಹೆಸರೂ ಇದೆ.

ಈ ಕಾವ್ಯದಲ್ಲಿ ೪೮ ಸಂಧಿಗಳೂ, ೨೬೬೬ ಪದ್ಯಗಳೂ ಇವೆ. ಇದು ಭಾಮಿನೀ ಷಟ್ಪದಿ ಛಂದಸ್ಸಿನಲ್ಲಿ ವಿರಚಿತವಾಗಿದೆ. ಕನ್ನಡ ಕವಿಚರಿತ್ರೆ (ಭಾಗ II ಪುಟ ೨೬೦) ಯಲ್ಲಿ ಈ ಗ್ರಂಥದಲ್ಲಿ ೨೬೬೪ ಪದ್ಯಗಳಿದ್ದಂತೆ ಹೇಳಿದೆ- ಆದುದರಿಂದ ಕವಿಚರಿತ್ರೆಕಾರರಿಗೆ ಸಿಕ್ಕಿದ್ದ ಪ್ರತಿಗಿಂತ ಈ ನಮ್ಮ ಪ್ರತಿ ಭಿನ್ನವೆನ್ನಬಹುದಾಗಿದೆ.

ಈ ಗ್ರಂಥವನ್ನು ಬರೆದವನು ಕವಿರಾಜ ಕಂಠೀರವ ಎಂದು ತನ್ನನ್ನು ವಿಶೇಷಿಸಿಕೊಂಡಿದ್ದಾನೆ. ಇವನ ನಿಜವಾದ ಹೆಸರೇನೆಂಬುದು ಗ್ರಂಥದಲ್ಲೆಲ್ಲಿಯೂ ಉಕ್ತವಾಗಿಲ್ಲ. ಇವನು ಶೃಂಗೇರಿಯ ಶ್ರೀ ರಾಮಚಂದ್ರ ಗುರುವನ್ನು ಸ್ತೋತ್ರ ಮಾಡಿರುವುದರಿಂದ ಇವನನ್ನು 'ರಾಮಚಂದ್ರ ಗುರುಶಿಷ್ಯ' ಎಂದು ಕವಿ ಚರಿತ್ರಕಾರರು ಕರೆದಿದ್ದಾರೆ. ಆದರೆ ನಮಗೆ ದೊರೆತಿರುವ ಪ್ರತಿಯಲ್ಲಿ 'ಕವಿರಾಜ ಕಂಠೀರವ' ಎಂಬ ಕವಿಯ ಬಿರುದು ಮಾತ್ರ ಲಭಿಸಿದೆ. ಇವನ ನಿಜವಾದ ಹೆಸರು ಲಭಿಸಿಲ್ಲ.

ಈ ಕವಿಯು ತನ್ನ ಗ್ರಂಥದ ಆದಿಯಲ್ಲಿ, ವ್ಯಾಸಮುನಿ, ಉದ್ಭಟ, ಬಾಣ, ಬಿಲ್ಹಣ, ಶುಕ, ಕಾಳಿದಾಸ, ಹರೀಶ್ವರ, ಕುಮಾರವ್ಯಾಸ ಮೊದಲಾದವರನ್ನು ಸ್ಮರಿಸಿದ್ದಾನೆ. ಇವರಲ್ಲಿ ಹರಿಹರ, ಮತ್ತು ಕುಮಾರ ವ್ಯಾಸರು ಮಾತ್ರ ಕನ್ನಡ ಕವಿಗಳು ಮಿಕ್ಕವರು ಸಂಸ್ಕೃತ ಕವಿಗಳು.

ತನ್ನಕಾವ್ಯಕ್ಕೆ **ಕಾಶೀರಮಣನು** ಅಧಿಪತಿಯೆಂದೂ ಪ್ರಾಚೀನರಾದ ಕವಿನಾಥ, ಶಂಕರ ನಾರಾಯಣ, ದುಂಡಿರಾಜ ಮೊದಲಾದವರು ಈ ಕಾವ್ಯವನ್ನು ಹರಸಬೇಕೆಂದೂ ಕವಿ ಹೇಳಿದ್ದಾನೆ. ಅಲ್ಲದೆ ತನ್ನ ಕಾವ್ಯದ ಪ್ರಾರಂಭದಲ್ಲಿ ಶಿವಶಂಭು, ಸರಸ್ವತಿ, ಆದಿಬ್ರಹ್ಮ, ಷಣ್ಮುಖ, ನಂದೀಶ್ವರ, ಭೃಂಗೀಶ, ರೇಣುಕ, ದಾರುಕ, ಅನ್ನಪೂರ್ಣೆ, ಕಾಲಭೈರವ, ದೇವೇಶ ಗಣಗಳು, ಕಾಶಿಯ ಲಿಂಗಗಳು, ಮಣಿಕರ್ಣಿಕಾದಿ ತೀರ್ಥಗಳು, ಪಂಚಕ್ರೋಶ ರಕ್ಷಕರು, ಮುನೀಂದ್ರರು, ಭಾನು, ವೈವಸ್ವತ, ಸೂತ ಮೊದಲಾದ ಪುರಾತನರನ್ನು ಸ್ಮರಿಸಿದ್ದಾನೆ.

. ಸಂಸ್ಕೃತ ಭಾರತವನ್ನು ಬರೆದ. ಬಾದರಾಯಣ ಮುನಿ, ಪುರಾಣಗಳಲ್ಲಿ ಪ್ರಸಿದ್ಧನಾದ ಸೂತ ಪೌರಾಣಿಕ, ಕನ್ನಡ ಸಾಹಿತ್ಯದಲ್ಲಿ ಆಚಾರ್ಯ ಪುರುಷನಾದ **ಹಂಪೆಯ ಹರೀಶ್ವರ** ಮತ್ತು ಮಹಾಕವಿ **ಕುಮಾರ ವ್ಯಾಸ** ಇವರುಗಳನ್ನು ಬಹಳವಾಗಿ ಗ್ರಂಥದ ಪೀಠಿಕೆಯಲ್ಲಿ ಶ್ಲಾಘಿಸಿದ್ದಾನೆ.

ಕನ್ನಡ ಕವಿ ಚರಿತ್ರಗಾರರು ಈತನು ಪೂರ್ವ ಕವಿಗಳಲ್ಲಿ ಕುಮಾರ ವ್ಯಾಸನನ್ನು (ಕ್ರಿ.ಶ. ೧೪೩೦) ಮತ್ತು ಶೃಂಗೇರಿಯ ಶ್ರೀರಾಮಚಂದ್ರ ಭಾರತಿಯವರನ್ನು (ಕ್ರಿ. ಶ. ೧೫೦೮-೧೫೬೦) ಸ್ಮರಿಸಿದುದರಿಂದ ಇವನ ಕಾಲವು **ಸುಮಾರು ಕ್ರಿ. ಶ. ೧೫೫೦** ಆಗಿರಬಹುದೆಂದು ನಿರ್ಧರಿಸಿದ್ದಾರೆ. ಇವರ ಈ ತರ್ಕವು ನಮಗಾದರೂ ಸಮಂಜಸವಾಗಿ ಕಾಣುತ್ತದೆ. ಆದರೆ ಕವಿಚರಿತೆಯಲ್ಲಿ ಇವನ ಸ್ಥಳ, ಮತಗಳನ್ನು ಕುರಿತು ಏನೂ ಹೇಳಿಲ್ಲ.

ಈ ಆದಿತ್ಯ ಪುರಾಣವನ್ನು ಮೊದಲು **ಸೂರ್ಯನು** ವೈವಸ್ವತನಿಗೂ ಅನಂತರ **ಸೂತನು** ಋಷಿ ಮುನಿಗಳಿಗೂ ಹೇಳಿದಂತೆ ತಿಳಿದುಬಂದಿದೆ. ಕವಿಯು "ಶಬ್ದಮಣಿ" ಮೊದಲಾದ ಶಾಸ್ತ್ರವು ಹೊದ್ದಿಕೆಯ ಸಾಹಿತ್ಯಕಲ್ಲದೆ ಹೃದ್ಯ ಷಟ್ಪದಿ ಹಾಡುಗಬ್ಬಗಳಿಂಗೆ ಬೇಕೆಂದು ಒರೆವೆ ಬೆಳ್ನುಡಿಯ ಬೆರಕೆಯಲಿ" ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಪ್ರೌಢವಾದ ವಸ್ತುಕ ಶೈಲಿಯನ್ನು ಬಿಟ್ಟು ಸರಳವಾದ ವರ್ಣಕ ಶೈಲಿಯಲ್ಲಿ ಕಾವ್ಯಗಳನ್ನುಬರೆದ ವೀರಶೈವ ಕವಿ ಸಂಪ್ರದಾಯಕ್ಕೆ ಈತನು ಸೇರಿದವನೆಂದು ಹೇಳಬಹುದಾಗಿದೆ.

ಈ ಕವಿಯು ಕಾವ್ಯದ ಪ್ರಾರಂಭದಲ್ಲಿ ರೇಣುಕ, ದಾರುಕ,ನಂದೀಶ್ವರ, ಭೃಂಗೀಶ್ವರ, ವೀರಭದ್ರ, ಷಣ್ಮುಖ ಮೊದಲಾದ ವೀರಶೈವ ಪ್ರಮಥರನ್ನೂ ಹಂಪೆಯ ಹರೀಶ್ವರ ಮಹಾಕವಿಯನ್ನೂ ಬಹಳವಾಗಿ ಬಣ್ಣಿಸಿರುವುದರಿಂದಲೂ, ವೀರಶೈವ

ಮತಧರ್ಮಕ್ಕೆ ಸಂಬಂಧಪಟ್ಟ ತ್ರಿವಿಧದೀಕ್ಷೆ, ಇಷ್ಟಲಿಂಗಧಾರಣ ಇತ್ಯಾದಿ ವಿಚಾರಗಳನ್ನು ಅಲ್ಲಲ್ಲಿ ಹೇಳಿರುವುದರಿಂದಲೂ, ಈ ಗ್ರಂಥದ ಆದ್ಯಂತವಾಗಿ ಶಿವಪಾರಮ್ಯವನ್ನು ಕವಿ ನಿರೂಪಿಸಿರುವುದರಿಂದಲೂ ಈ ಗ್ರಂಥಕರ್ತೃವು ವೀರಶೈವ ಮತೀಯನೆಂದು ನಾವು ಹೇಳಲವಕಾಶವಿದೆ.

ಈ ಗ್ರಂಥವನ್ನು ಶ್ರಮಪಟ್ಟು ಸಂಗ್ರಹಿಸಿರುವ **ಶ್ರೀ ವೆಂಕಟರಾಯಾಚಾರ್ಯರು** ಈ ಪುರಾಣ ಕಾವ್ಯವನ್ನು ಕುರಿತು ಈ ಮುಂದೆ ಹೇಳುವಂತೆ ಬರೆದಿದ್ದಾರೆ. "ಕ್ರಿ. ಶ. ೧೬೫೦ರಲ್ಲಿದ್ದ **ಶಾಂತೇಶಲಿಂಗ** ಗುರುವು ಬ್ರಹ್ಮೋತ್ತರ ಪುರಾಣದಿಂದ ಆರಿಸಿ ಲಿಂಗಾಯತ ಕ್ರಮದಿಂದ ಷಟ್ಪದಿಯಲ್ಲಿ ಶಿವಕಥಾಮೃತ ಸಾರವನ್ನು ಬರೆದಿದ್ದಾನೆ. ಈ ಕವಿಯು ಆದಿತ್ಯ ಪುರಾಣದ ಮತ್ತು ಉಳಿದ ಪುರಾಣಗಳ ಕಥಾಸಾರಗಳಲ್ಲಿ ಕೆಲವನ್ನೂ ಸಂಗ್ರಹಿಸಿ ಶಿವಕಥಾಮೃತ ಶಿವಕಾವ್ಯವೆಂದು ಹೆಸರಿಸುವನು. ಜೈನ ಮಹಾಕವಿಗಳಾದ ಪಂಪ ಮತ್ತು ರನ್ನರು ತಮ್ಮನ್ನು ಪೋಷಿಸಿದ ರಾಜರ ಚರಿತೆಯೊಂದಿಗೆ ಪೌರಾಣಿಕ ಕಾವ್ಯಗಳು ಮತ್ತು ಜೈನಗುರುಗಳ ವಿಷಯಕ ಪುರಾಣಗಳನ್ನು ಒಂದೇತರದಲ್ಲಿ ರಚಿಸಿದರಷ್ಟೆ. ಅಂತೆಯೇ ಮೇಲಿನ ಶಿವಕಥಾಮೃತವನ್ನು ಆದಿತ್ಯ ಪುರಾಣಗಳ ಮತ್ತಿತರಗಳ ಸಾರವಾಗಿಸಿದಂತೆ ಬ್ರಹ್ಮೋತ್ತರ ಪುರಾಣದಿಂದ ಆರಿಸಿ ಶಾಂತೇಶಲಿಂಗನು, (ಕ್ರಿ.ಶ. ೧೬೫೦)ರಚಿಸಲು ಈಕವಿಯು (ಆದಿತ್ಯಪುರಾಣ ಕರ್ತೃವಿನ) ರೀತಿಯನ್ನನುಸರಿಸಿದ್ದಾನು ಎಂದೂಹಿಸಲವಕಾಶವಿದೆ. ಅದರಂತೆಯೇ ಈ ಇಬ್ಬರು ಕವಿಗಳೂ ಲಿಂಗಾಯತರೆಂದು ಸ್ಪಷ್ಟವಾಗುವುದು" ಎಂದು ಹೇಳಿದ್ದಾರೆ.

(ಶರಣ ಸಾಹಿತ್ಯ ಸಂ. ೧೩. ಪುಟ ೬೧)

ಈ ಕವಿ ಪ್ರಾಯೇಣ ಶಿವಮೊಗ್ಗ-ಚಿಕ್ಕಮಗಳೂರು ಮತ್ತು ಮಂಗಳೂರು ಪ್ರಾಂತಗಳಲ್ಲಿದ್ದವನೆಂದು ಊಹಿಸಬಹುದಾಗಿದೆ. ಈತನ ಗ್ರಂಥವು ತಾಳೆಯೋಲೆಯಲ್ಲಿ ಆ ಭಾಗದಲ್ಲಿಯೇ ಸಿಕ್ಕಿದೆ. ಅಲ್ಲದೆ ಶೃಂಗೇರಿಯ ಶ್ರೀ ರಾಮಚಂದ್ರ ಗುರುವನ್ನು ಇವನು ಬಹಳ ಗೌರವದಿಂದ ಕೊಂಡಾಡಿರುತ್ತಾನೆ. ಕಾರಣ ಕವಿ ಆ ಪ್ರಾಂತದವನೇ ಆಗಿರಬೇಕೆಂದೂ ಮೊದಲು ಬ್ರಾಹ್ಮಣನಾಗಿದ್ದು ಅನಂತರ ಲಿಂಗಧಾರಣ ಹೊಂದಿರಬೇಕೆಂದೂ ಊಹಿಸಬಹುದಾಗಿದೆ.

ಮಲೆನಾಡಿನಲ್ಲಿ ೧೫೦೦ರಿಂದ ೧೭೬೩ರ ವರೆವಿಗೆ ಬಾಳಿದ ಕೆಳದಿಯ ರಾಜರ ಕಾಲದಲ್ಲಿ ಅಂದರೆ ಕವಿ ಚರಿತ್ರಕಾರರು. ಊಹಿಸಿರುವಂತೆ ೧೫೫೦ರ ಸುಮಾರಿನಲ್ಲಿ ಕೆಳದಿಯಲ್ಲಿ ಆ ರಾಜ್ಯವನ್ನು ದೊಡ್ಡ ಸಂಕಣ್ಣನಾಯಕನು ಆಳುತ್ತಿದ್ದನು.(೧೫೪೬-೧೫೭೦) ಅದೇ ಕಾಲದಲ್ಲಿ ಈ ಕವಿ ಜೀವಿಸಿರಬೇಕೆಂದು ಸ್ಥೂಲವಾಗಿ ಊಹಿಸಬಹುದಾಗಿದೆ.

ಇವನ ಕಾವ್ಯವು ಸುಂದರವಾದ ಭಾಮಿನೀ ಷಟ್ಪದಿಗಳಲ್ಲಿ ವಿರಚಿತವಾಗಿದೆ. ಕವಿಯು ಷಟ್ಪದಿಯ ಅಭಿಮಾನಿಯೆಂದು ಹೇಳಲಿಕ್ಕೆ ಆತನ ಈ ಪದ್ಯ ನಿದರ್ಶನವಾಗಿದೆ.

"ಆರು ಕಾಲುಗಳಿಂದ ನಡೆವಳು ।
ಮೂರು ಹೆಜ್ಜೆಗಳಿಂದ ರಂಜಿಸಿ ।
ಸಾರಿ ಡಂಗುರ ಹೊಯ್ಸಿ ಕವಿಗಳಿಗಾನೆ ನೆರವೆಂದು ॥
ತೋರದುಕ್ತಿಯು ನಧಿಕ ವೇಗದಿ ।
ತೋರಿ ಸೊಬಗನು ಬೀರಿ ಸುಖವನು ।
ಸೂರೆ ಗೊಟ್ಟಳು ಕೇಳ್ದರಿಗೆ ಕೃತಿ ಭಾಮಿನೀ ರನ್ನೆ ॥

ಕವಿಯು ಭಾಮಿನೀ ಷಟ್ಪದಿಯನ್ನು ಸ್ತ್ರೀರೂಪವಾಗಿ ಭಾವಿಸಿ ಕೃತಿಭಾಮಿನಿಯನ್ನು ಬಣ್ಣಿಸಿರುವನು. ಪ್ರಾಯೇಣ ಕನ್ನಡದ ಜನಪ್ರಿಯ ಷಟ್ಪದೀ ಕಾವ್ಯಗಳಾದ **ಕನ್ನಡ ಭಾರತ, ಬಸವಪುರಾಣ, ಪ್ರಭುಲಿಂಗಲೀಲೆ, ಜೀವಂಧರ ಚರಿತ್ರೆ, ನಳಚರಿತ್ರೆ** ಮೊದಲಾದ ಸುಂದರ ಕಾವ್ಯಗಳು ಭಾಮಿನೀ ಷಟ್ಪದಿಯಲ್ಲಿಯೇ ವಿರಚಿತವಾಗಿವೆ ಎಂಬುದನ್ನು ನಾವಿಲ್ಲಿ ಸ್ಮರಿಸಬಹುದಾಗಿದೆ.

ಕವಿಯು ತನ್ನ ಕಾವ್ಯವನ್ನು ಸರಳವಾದ ದ್ರಾಕ್ಷಾಪಾಕದ ಶೈಲಿಯಲ್ಲಿ ವಿರಚಿಸಿದ್ದಾನೆ. ಪ್ರೌಢದಾದ ನಾರಿಕೇಳಪಾಕವೂ ಮಧ್ಯಮತರದ ಕದಳೀಪಾಕವೂ ಈ ಕವಿಗೆ ಹಿಡಿಸಿದಂತೆ ಕಾಣುವುದಿಲ್ಲ. ಜನಸಾಮಾನ್ಯರು ಎಚ್ಚರಗೊಳ್ಳಬೇಕಾದರೆ ಸರಳ ಸುಂದರವಾದ ದ್ರಾಕ್ಷಾಪಾಕವೇ ಅಗತ್ಯವೆಂದು ಈ ಕವಿ ಭಾವಿಸಿದಂತೆ ಕಾಣುತ್ತದೆ. ಶಿವಶರಣರೂ ಹರಿದಾಸರೂ ಶತಕಕಾರರೂ ಈ ದ್ರಾಕ್ಷಾಪಾಕದಲ್ಲಿಯೇ ತಮ್ಮ ಗ್ರಂಥಗಳನ್ನು ಬರೆದಿರುವರು. ಸುಂದರವೂ ಫಲಭರಿತವೂ ಆದ ಅರಣ್ಯಕ್ಕೆ ಹೋದ ಕನ್ನಡವಕ್ಕಿಗಳು (ಗಿಳಿಗಳು) ರುಚಿಕಟ್ಟಾದರೂ ಗಡುಸಾದ ಚಿಪ್ಪು ನಾರುಗಳಿಂದ ಕೂಡಿದ ತೆಂಗಿನಕಾಯನ್ನು ಬಿಟ್ಟು ಮೃದುಮಧುರವಾದ ಮಾವಿನ ಹಣ್ಣುಗಳನ್ನು ಪ್ರೇಮಿಸುವಂತೆ ವಿಳಸದರ್ಥಗಳಿದ್ದರೂ ರಸಿಕರಾದವರು ಅತಿಪ್ರೌಢವಾದ ಕಾವ್ಯಗಳನ್ನು ಬಿಟ್ಟು ಸರಳ ಸುಂದರ ಕಾವ್ಯಗಳನ್ನು ಪ್ರೀತಿಸುವರು ಎಂಬುದು ಲೋಕಾನುಭವದಿಂದ ಕಂಡು ಬರುತ್ತಿದೆ. ಆದುದರಿಂದಲೇ ಈ ಕವಿಯು ಜಾಣರು ತಲೆದೂಗುವ ಸರಳಮಾರ್ಗವನ್ನು ಸ್ವೀಕರಿಸಿರುವನು. ಕವಿತೆಯು ಸರಳವಾಗಿಯೂ ಪ್ರಾಸಾದಿಕವಾಗಿಯೂ ಇದೆ. ಗೂಢವಾದ ಧರ್ಮತತ್ವಗಳನ್ನು ಕವಿ ಸರಳವಾಗಿ ಸುಲಭವಾಗಿ ನಿರೂಪಿಸುತ್ತಾನೆ. ಕೆಲವು ಪದ್ಯಗಳು ಕುಮಾರವ್ಯಾಸನ ಶೈಲಿಯನ್ನು ಅನುಕರಿಸುತ್ತವೆ. ಅಲ್ಲಲ್ಲಿ ವ್ಯಾಕರಣ ಮತ್ತು ಛಂದಸ್ಸಿನ ನಿಯಮಗಳನ್ನು ಕವಿ ಉಲ್ಲಂಘಿಸಿರುವುದೂ ಉಂಟು. ಹೀಗೆ ಶಾಸ್ತ್ರ ಮರ್ಯಾದೆಯನ್ನು ಮೀರುವುದನ್ನು ವರ್ಣಕ ಕವಿಗಳು ತಮ್ಮ ಹಕ್ಕೆಂದು ಭಾವಿಸಿರುವುದಕ್ಕೆ ಸಾಹಿತ್ಯದಲ್ಲಿ ನಿದರ್ಶನಗಳೂ ಇವೆ.

ಈ ಗ್ರಂಥವನ್ನು ಶುದ್ಧವಾಗಿ ಪ್ರಕಟಿಸಲು ನಮಗೆ ಸಾಧ್ಯವಾಗಿಲ್ಲ. ನಮಗೆ ಅರ್ಥವಾಗದ ಕೆಲವು ಪದ ಪದ್ಯಗಳನ್ನುನಾವು ಹಾಗೆಯೇ ಬಿಟ್ಟಿರುತ್ತೇವೆ. ಮೂಲವು

ತಾಳೆಯೋಲೆಯಲ್ಲಿದೆ. ಗ್ರಂಥವನ್ನು ಆದಷ್ಟು ಹಿತಮಿತವಾಗಿ ಪ್ರಕಟಿಸಬೇಕೆಂದು ಆಲೋಚಿಸಿರುವುದರಿಂದ ಒಟ್ಟು ಈ ಸಂಗ್ರಹದಲ್ಲಿ ಒಟ್ಟಿಗೆ ಪದ್ಯಗಳು ಸಾವಿರಕ್ಕೆ ಹೆಚ್ಚದಂತೆ ಪದ್ಯಗಳನ್ನು ಅಳವಡಿಸಲಾಗಿವೆ. ಈ ಗ್ರಂಥದಲ್ಲಿ ಸಾಹಿತ್ಯಾಂಶಗಳಿಗಿಂತಲೂ ಧಾರ್ಮಿಕಾಂಶಗಳಿಗೇ ಹೆಚ್ಚಿನ ಪ್ರಾಮುಖ್ಯತೆಯಿದೆ.

ಮೂಲಗ್ರಂಥದ ೧೬ನೇ ಸಂಧಿಯಲ್ಲಿ ಮೂಲದಲ್ಲಿ ೪೫ ಪದ್ಯಗಳೂ, ೧೭ನೇ ಸಂಧಿಯಲ್ಲಿ ೬೨ ಪದ್ಯಗಳೂ, ೧೮ನೇ ಸಂಧಿಯಲ್ಲಿ ೬೧ ಪದ್ಯಗಳೂ ಇವೆ. ನಮ್ಮ ಸಂಗ್ರಹದಲ್ಲಿ ಅನುಕ್ರಮವಾಗಿ ಆಯಾ ಸಂಧಿಗಳಿಂದ ೧೪, ೯, ೧೨ ಪದ್ಯಗಳನ್ನು ಮಾತ್ರ ಸ್ವೀಕರಿಸಲಾಗಿದೆ. ಗ್ರಂಥವನ್ನು ಆದಷ್ಟು ಹಿತಮಿತಗೊಳಿಸುವ ಉದ್ದೇಶವೇ ಇದಕ್ಕೆ ಕಾರಣ. ಗ್ರಂಥದ ಸ್ವಾರಸ್ಯ ಕೆಡದಂತೆ ಎಚ್ಚರಗೊಳ್ಳಲಾಗಿದೆ.

ಈ ಪ್ರಥಮ ಭಾಗದಲ್ಲಿ ೧೮ ಸಂಧಿಗಳು ಪ್ರಕಟವಾಗಿವೆ. ಇನ್ನ ೩೦ ಸಂಧಿಗಳು ಉಳಿದಿವೆ. ಅವನ್ನೂ ಎರಡು ಮತ್ತು ಮೂರನೇ ಭಾಗಗಳಲ್ಲಿ ಪ್ರಕಟಿಸಬೇಕೆಂದು ಆಲೋಚಿಸಿರುತ್ತೇವೆ. ಕನ್ನಡ ಸಾಹಿತ್ಯ ಮತ್ತು ಸನಾತನಧರ್ಮದ ಅಭಿಮಾನಿಗಳು ನಮಗೆ ಉದಾರ ಆಶ್ರಯವಿತ್ತಲ್ಲಿ ಸಮಗ್ರ ಗ್ರಂಥವನ್ನೇ ನಾವು ಪ್ರಕಟಿಸಲು ಕೂಡ ಧೈರ್ಯಮಾಡುತ್ತೇವೆ.

## ಪ್ರಾಚೀನ ಪುರಾಣಗಳು

ಈ ಕನ್ನಡ ಆದಿತ್ಯ ಪುರಾಣವು! ಸಂಸ್ಕೃತ ಆದಿತ್ಯ ಪುರಾಣದ ಭಾಷಾಂತರವಾಗಿದೆ. ಗೀರ್ವಾಣ ಭಾಷೆಯಲ್ಲಿ ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ. ಭವಿಷ್ಯ, ಬ್ರಹ್ಮವೈವರ್ತ, ಲೈಂಗ, ವಾರಾಹ, ಸ್ಕಾಂದ ವಾಮನ, ಕೂರ್ಮ. ಮಾತ್ಸ್ಯ, ಗಾರುಡ, ಮತ್ತು ಬ್ರಹ್ಮಾಂಡ ಎಂಬ ೧೮ ಪುರಾಣಗಳು ಪ್ರಸಿದ್ಧವಾಗಿವೆ.

ಭಾಗವತ ಗ್ರಂಥವು ಶ್ರೀಕೃಷ್ಣನ ಮಹಿಮೆಯನ್ನುಪದೇಶಿಸುವ **ಶ್ರೀ ಭಾಗವತ** ಎಂಬುದಾಗಿಯೂ, ದೇವೀಮಹಿಮೆಯನ್ನು ತಿಳಿಸುವ **ದೇವೀಭಾಗವತ** ಎಂಬುದಾಗಿಯೂ ಎರಡು ಭಾಗವಾಗಿದೆ. ಶ್ರೀ ಭಾಗವತವು ವಿಷ್ಣುಪುರಾಣದ ಆಧಾರದ ಮೇಲೆ ಬರೆದ ನೂತನ ಗ್ರಂಥವೆಂದು ಕೆಲವು ವಿದ್ವಾಂಸರು ತರ್ಕಿಸಿದ್ದಾರೆ.

ಮೇಲೆಕಂಡ ೧೮ ಪುರಾಣಗಳಲ್ಲಿ ಒಟ್ಟು ೪ ಲಕ್ಷ ಶ್ಲೋಕಗಳಿವೆ. ಸಂಸ್ಕೃತ ಭಾರತದಲ್ಲಿ ೧ ಲಕ್ಷ ಶ್ಲೋಕಗಳೂ, ರಾಮಾಯಣದಲ್ಲಿ ೨೫ ಸಾವಿರ ಶ್ಲೋಕಗಳೂ ಇರುವುದಾಗಿ ತಿಳಿದುಬಂದಿದೆ. ರಾಮಾಯಣ, ಭಾರತಗಳು ಇತಿಹಾಸ ಗ್ರಂಥಗಳೆಂದು ಶ್ರೀ ನಿಜಗುಣಶಿವಯೋಗಿಗಳು **ವಿವೇಕ ಚಿಂತಾಮಣಿ** ಎಂಬ ತಮ್ಮಗ್ರಂಥದಲ್ಲಿ ಹೇಳಿದ್ದಾರೆ.

ಪುರಾಣಗಳಲ್ಲಿ ಸರ್ಗ, ವಿಸರ್ಗ, ವೃತ್ತಿ. ರಕ್ಷ, ಅಂತರ, ವಂಶ, ವಂಶಾನುಚರಿತ, ಸಂಸ್ಥಾ, ಹೇತು, ಅಪಾಶ್ರಯ ಎಂಬುದಾಗಿ ೧೦ ಲಕ್ಷಣಗಳಿರಬೇಕೆಂದೂ, ಉಪಪುರಾಣಗಳಲ್ಲಿ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರವರ್ಣನ, ವಂಶಾನುಚರಿತಗಳೆಂಬಐ ಲಕ್ಷಣಗಳಿರಬೇಕೆಂದೂ ಪ್ರಾಚೀನರು ಹೇಳಿದ್ದಾರೆ.

ಸುಪ್ರಸಿದ್ಧವಾದ ೧೮ ಪುರಾಣಗಳೇ ಅಲ್ಲದೆ ೧೮ ಉಪಪುರಾಣಗಳು ಪ್ರಸಿದ್ಧವಾಗಿವೆ. ಸನಕ್ಕುಮಾರ, ನಾರಸಿಂಹ. ನಂದಿ, ಶಿವಧರ್ಮ, ದೂರ್ವಾಸ, ನಾರದೀಯ, ಕಪಿಲ, ಮಾನವ, ಉಶನ, ಬ್ರಹ್ಮಾಂಡ, ವಾರುಣ, ಕಾಳಿಂಗ, ವಾಸಿಷ್ಠ, ಸಾಂಖ್ಯ ಸೌರ, ಪಾರಾಶರ, ಮರೀಚಿ, ಭಾರ್ಗವ ಎಂಬಿವೇ ೧೮ ಉಪಪುರಾಣಗಳು.

ಈ ಮೇಲೆಕಂಡ ೧೮ ಪುರಾಣಗಳನ್ನು ಮಹರ್ಷಿ ವೇದವ್ಯಾಸರೇ ಬರೆದರೆಂಬ ಪರಂಪರಾಗತ ನಂಬಿಕೆಯುಂಟು. ವೇದದಲ್ಲಿ ಪ್ರತಿಪಾದಿಸಲ್ಪಟ್ಟಿರುವ ರಹಸ್ಯಾರ್ಥಗಳನ್ನು ಸುಲಭವಾಗಿ ಎಲ್ಲರಿಗೂ ವಿವರಿಸುವ ಸಲುವಾಗಿ ಪುರಾಣಗಳು ಹೊರಬಿದ್ದಿವೆ. ಇವುಗಳನ್ನು ಅನೇಕಮಂದಿ ಮಹರ್ಷಿಗಳು ಬೇರೆಬೇರೆ ಕಲ್ಪಗಳಲ್ಲಿ ರಚಿಸಿದರೆಂದು ಕೆಲವುಮಂದಿ ವಿದ್ವಾಂಸರು ತರ್ಕಿಸಿದ್ದಾರೆ. ಆದಿಯಲ್ಲಿ ೧೦೦ ಕೋಟಿ ಗ್ರಂಥ ಪರಿಮಿತಿಯ ಪುರಾಣಗಳಿದ್ದುವೆಂದೂ, ವೇದವು ಬ್ರಹ್ಮನ ಬಾಯಿಂದ ಹೊರಬರುವ ಮೊದಲೇ ಪುರಾಣಗಳು ಹೊರ ಬಂದುವೆಂದೂ ಅದ್ದರಿಂದಲೇ (ಪುರಾ ನೀಯತೇ ಇತಿ ಪುರಾಣಂ)ಎಂದು ಇದಕ್ಕೆ ಹೆಸರಾಯಿತೆಂದೂ ಹೇಳುತ್ತಾರೆ.

ಪ್ರಳಯಕಾಲದಲ್ಲಿ ಶತಕೋಟಿ ಪರಿಮಿತವಾದ ಈ ಪುರಾಣರಾಶಿಯು ಸುಟ್ಟುಹೋಗಲಾಗಿ ವಿಷ್ಣುವು ಮತ್ಸ್ಯರೂಪದಿಂದ ಅವತರಿಸಿ ಅವುಗಳನ್ನೆಲ್ಲ ಚತುರ್ಮುಖನಿಗೆ ಉಪದೇಶಿಸಿದನು. ಕಾಲಕ್ರಮದಲ್ಲವು ಶಿಥಿಲವಾಗುತ್ತಾ ಬಂದುವು. ಅದಕ್ಕಾಗಿ ವಿಷ್ಣುವು ಒಂದೊಂದು ಚತುರ್ಯುಗದ ದ್ವಾಪರಯುಗದಲ್ಲಿಯೂ ವ್ಯಾಸರೂಪವಾಗಿ ಅವತರಿಸಿ ಆ ಪುರಾಣರಾಶಿಯ ಸಾರವನ್ನು ನಾಲ್ಕು ಲಕ್ಷ ಗ್ರಂಥ ಪರಿಮಿತಿಗೆ ಇಳಿಸಿ ಲೋಕದಲ್ಲಿ ಪ್ರಚಾರಗೊಳಿಸಿರುತ್ತಾನೆಂದು ಮತ್ಸ್ಯಪುರಾಣದಲ್ಲಿ ಹೇಳಿದೆ.

ಇದರಿಂದ ವೇದವ್ಯಾಸರು ಪ್ರಾಚೀನ ಪುರಾಣಗಳನ್ನು ಸಂಗ್ರಹಿಸಿದ ಲೋಕೋಪಕಾರಿಯೆಂಬುದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಈ ಪುರಾಣಗಳ ಮಹಾತ್ಮೆ, ಇವುಗಳಲ್ಲಿ ವರ್ಣಿತವಾದ ವಿಷಯಗಳು ಯಾವ ಕಾಲದ್ದು ? ಯಾರಿಂದ ಯಾರಿಗಾಗಿ ಹೊರಬಿದ್ದುವು ? ಎಂಬುದನ್ನು ಸ್ಪಷ್ಟವಾಗಿ ಹೇಳಲು ಹೆಚ್ಚಿನ ಸಂಶೋಧನೆ ಅಗತ್ಯವೆಂದು ತೋರುತ್ತದೆ. ಕೃಷ್ಣದ್ವೈಪಾಯದ ವೇದವ್ಯಾಸನು ೧೮ ಪುರಾಣಗಳನ್ನು ರಚಿಸಿ ತನ್ನ ಮಗನಾದ ಶುಕನಿಗೆ ಬೋಧಿಸಿದನೆಂದು ಮತ್ತೆ ಹಲವೆಡೆ ಪುರಾಣಗಳಲ್ಲಿ ಹೇಳಿದ ಆಧಾರವಿದೆ.

ಸಂಸ್ಕೃತ ಸಾಹಿತ್ಯದಲ್ಲಿ ಸುಪ್ರಸಿದ್ಧಗಳಾದ ಪುರಾಣ, ಉಪಪುರಾಣಗಳಂತೆಯೇ ಜೈನ ಸಾಹಿತ್ಯದಲ್ಲಿ ತೀರ್ಥಂಕರರ ಪುರಾಣಗಳೂ, ವೀರಶೈವ ಸಾಹಿತ್ಯದಲ್ಲಿ ಶಿವಶರಣರ ಪುರಾಣಗಳೂ ಸಂಸ್ಕೃತದಲ್ಲಿ ಪ್ರಸಿದ್ಧವಾಗಿವೆ. ಕನ್ನಡ ಸಾಹಿತ್ಯದಲ್ಲಿ ಕೂಡ ಆದಿಪುರಾಣ,ಚಂದ್ರಪ್ರಭ ಪುರಾಣ,ಮಲ್ಲಿನಾಥ ಪುರಾಣ, ನೇಮಿನಾಥ ಪುರಾಣ, ಪದ್ಮರಾಜ ಪುರಾಣ, ಚನ್ನಬಸವ ಪುರಾಣ, ಬಸವಪುರಾಣ, ಪ್ರಭುದೇವರ ಪುರಾಣ, ಸಿದ್ಧೇಶ್ವರ ಪುರಾಣ, ರೇವಣಸಿದ್ದ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಶಿವಯೋಗೀಶ್ವರ ಪುರಾಣ. ವೀರೇಶ್ವರಪುರಾಣ ಮೊದಲಾದುವುಗಳನ್ನು ನಾವು ಸ್ಮರಿಸಿಕೊಳ್ಳಬಹುದು. ಇದರಂತೆಯೇ ತೆಲಗು, ತಮಿಳು, ಹಿಂದಿ, ಮರಾಠಿ ಮೊದಲಾದ ಭಾಷೆಗಳಲ್ಲಿಯೂ ಈ ಪುರಾಣ ಸಾಹಿತ್ಯ ವಿಪುಲವಾಗಿದೆ.

ಪ್ರಾಚೀನ ಕಾಲದಿಂದ ಈ ಸಂಸ್ಕೃತ ಪುರಾಣಗಳ ಭಾಷಾಂತರಕಾರ್ಯ ನಮ್ಮಲ್ಲಿ ಪ್ರಾರಂಭವಾಗಿದೆ. ಶ್ರೀ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಮಹಾಕವಿ ಚಿಕ್ಕುಪಾಧ್ಯಾಯನು (ಕ್ರಿ. ಶ. ೧೬೭೨) ವಿಷ್ಣು ಪುರಾಣವನ್ನು ಕನ್ನಡಕ್ಕೆ ಗದ್ಯಪದ್ಯ ರೂಪದಲ್ಲಿ ಭಾಷಾಂತರಿಸಿದ್ದಾನೆ.

ಕ್ರಿ. ಶ. ೧೬೧೭-೩೭ರಲ್ಲಿ ಮೈಸೂರು ಮಹಾರಾಜರಾಗಿದ್ದ ಚಾಮರಾಜರು ಸ್ಕಾಂದ ಪುರಾಣ ಬ್ರಹ್ಮೋತ್ತರ ಖಂಡಕ್ಕೆ ಕನ್ನಡದಲ್ಲಿ ಟೀಕೆ ಬರೆದಿದ್ದಾರೆ.

ಕ್ರಿ. ಶ. ೧೬೬೫ರಲ್ಲಿದ್ದ ಮುಮ್ಮಡಿ ತಮ್ಮ ಎಂಬ ವೀರಶೈವ ಕವಿಯು ಸ್ಕಾಂದ ಪುರಾಣಾಂತರ್ಗತ ‘ಶಂಕರ ಸಂಹಿತೆ’ಯನ್ನು ೪೧೦೦ ವಾರ್ಧಕ ಷಟ್ಪದಿಗಳುಳ್ಳ ಕಾವ್ಯವಾಗಿ ಬರೆದಿದ್ದಾನೆ. ಇತ್ತೀಚಿನ ಕೆಲವು ವಿದ್ವಾಂಸರೂ ಈ ಮಹತ್ಕಾರ್ಯದಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆ.

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಕಾಶೀಕಾಂಡ, ದೇವೀಭಾಗವತ ಟೀಕೆ, ಭಾಗವತ, ಲಿಂಗ ಪುರಾಣ, ಶಂಕರಸಂಹಿತೆ, ಹರಿವಂಶ ಎಂಬಿಷ್ಟು ಗ್ರಂಥಗಳನ್ನು ಕನ್ನಡಿಸಿ ನಮ್ಮ ಸಾಹಿತ್ಯಕ್ಕೆ ಉಪಕಾರಮಾಡಿದ್ದಾರೆ.

ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ, ಮೈಸೂರಿನ ಮಹಾಪ್ರಭುಗಳೂ ಆದ **ಶ್ರೀಮಜ್ಜಯ ಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು, ಅರಮನೆಯ** ಉದಾರಾಶ್ರಯದಲ್ಲಿ ಎಲ್ಲ ಸಂಸ್ಕೃತ ಪುರಾಣಗಳನ್ನೂ ಕನ್ನಡದಲ್ಲಿ ತಾತ್ಪರ್ಯಗಳೊಡನೆ ಭಾಷಾಂತರಿಸಿ ಪ್ರಕಟಿಸಿ ಕನ್ನಡಕ್ಕೆ ಮಹೋಪಕಾರ ಮಾಡಿರುತ್ತಾರೆ. ಇಂತಹ ಉತ್ತಮವಾದ ಪುರಾಣ ಸಾಹಿತ್ಯವನ್ನು ಸಮಗ್ರವಾಗಿ ಕನ್ನಡಕ್ಕೆ ದೊರಕಿಸಿಕೊಟ್ಟ ಪೂಜ್ಯರಾದ **ಮೈಸೂರು ಮಹಾರಾಜರು** ಸಮಗ್ರ ಕನ್ನಡ ಸಾಹಿತ್ಯಾಭಿಮಾನಿಗಳ ಕೃತಜ್ಞತೆಗೆ ಪಾತ್ರರಾಗಿರುತ್ತಾರೆ.

ಶರಣ ಸಾಹಿತ್ಯ ಸಂಪುಟ ೧೨, ೧೩ ಮತ್ತು ೧೪ರಲ್ಲಿ ಇದುವರೆಗೆ ಪ್ರಕಟಿಸಿದ ಕನ್ನಡ ಆದಿತ್ಯ ಪುರಾಣದ ೧೮ ಅಧ್ಯಾಯಗಳನ್ನು ಈಗ ಗ್ರಂಥರೂಪದಲ್ಲಿ ಪ್ರಕಟಿಸಿರುತ್ತೇವೆ. ನಮಗೆ ತಕ್ಕಷ್ಟು ತಾಳೆಯೋಲೆ ಪ್ರತಿಗಳ ಗ್ರಂಥಗಳು ಲಭಿಸಿದರೆ, ಪ್ರೋತ್ಸಾಹಕರ ಉದಾರಾಶ್ರಯವೂ ದೊರೆತರೆ ಈ ಕನ್ನಡ ಆದಿತ್ಯ ಪುರಾಣವನ್ನು ಸಮಗ್ರವಾಗಿ ಪ್ರಕಟಿಸುವುದರ ಮೂಲಕ ಕನ್ನಡ ಸಾಹಿತ್ಯ ಸೇವೆಯನ್ನು ಸಲ್ಲಿಸಬೇಕೆಂಬ ಆಕಾಂಕ್ಷೆಯುಳ್ಳವರಾಗಿರುತ್ತೇವೆ.

ಪ್ರಕೃತ ನಮ್ಮ ಗ್ರಂಥಪ್ರಕಟನೆಗೆ ಬಹುವಾಗಿ ನೆರವಾಗಿರುವ ಶ್ರೀ ಕೆ. ವೆಂಕಟರಾಯಾಚಾರ್ಯರಿಗೆ ನಮ್ಮ ವಿಶ್ವಾಸಪೂರ್ವಕ ವಂದನೆಗಳನ್ನು ಮತ್ತೆ ಮತ್ತೆ ಸಮರ್ಪಿಸುತ್ತೇವೆ. ವಿದ್ವಾಂಸರು ಈಗ್ರಂಥದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಸೂಚಿಸಿದರೆ ಅದರಿಂದ ನಮಗೆ ತುಂಬಾ ಉಪಕಾರವಾಗುತ್ತದೆ.

ಇಂತು

ಬ. ಶಿವಮೂರ್ತಿಶಾಸ್ತ್ರೀ

ಶರಣ ಸಾಹಿತ್ಯ ಕಾರ್ಯಾಲಯ.

ಬೆಂಗಳೂರು

ದಿನಾಂಕ ೨೫-೯-೧೯೫೧

—:★:—

## ಸಮರ್ಪಣ

ಕನ್ನಡ ಸಾಹಿತ್ಯ ಸಂಸ್ಕೃತಿಗಳ ಉದ್ಧಾರಕರೂ, ವೀರಶೈವ ಸಾಹಿತ್ಯದ
ನಿಸ್ಸೀಮ ಪಂಡಿತರೂ, ಸಾಹಿತ್ಯ ತಪಸ್ವಿಗಳೂ,
ಶರಣ ಸಾಹಿತ್ಯದ ಹಿತಚಿಂತಕರೂ ಆಗಿದ್ದ

**ಕೈ|| ಎಸ್. ಎಸ್. ಬಸವನಾಳರ**

ಪವಿತ್ರಾತ್ಮನಿಗೆ



ಕನ್ನಡ ನಾಡು ನುಡಿಗಳ ಸೇವೆಗಾಗಿ ತಮ್ಮ ಪವಿತ್ರ ಜೀವನವನ್ನು ಸವೆಸಿದ
ಕರ್ಮಯೋಗಿ

**ಕೈ|| ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳ್ ಎಂ.ಎ. ಅವರು**
**ಧಾರವಾಡ.**

# ಕನ್ನಡ ಆದಿತ್ಯ ಪುರಾಣ

## (ಒಂದನೇ ಸಂಧಿ ನಾಂದೀ ಪದ್ಯಗಳು)

ಸೂಚನೆ ॥ ಶಿವಕಥಾಮೃತವೆಂಬ ಶಿವಕಾ।
ವ್ಯವನು ಪೇಳ್ವಡೆ ಮೊದಲು ವಿಸ್ತರಿ।
ಸುವೆನು ನಾಂದೀ ಸಂಧಿಯನು ಶಿವಮುಖ್ಯ ಸಂಸ್ತುತಿಯ ॥

ಭಾ॥ ಷ॥ ಶ್ರೀ ಮದಮೃತಮಯೂಖ ಶೇಖರ।
ತಾಮರಸ ನೇತ್ರಾದಿ ದಿವಿಜ।
ಸ್ತೋಮಮುಕುಟಮಣಿಪ್ರಭಾವಿತ ರಾಜಿತಾಂಘ್ರಿಯುಗ ॥
ಸೋಮ ಮಂಗಲನಾಮ ಕರುಣಾ।
ಧಾಮ ಸುಖವಿಶ್ರಾಮ ಭಕ್ತ।
ಪ್ರೇಮ ಕಾಶೀರಮಣ ವಿಸ್ತರಿಸಿದ ಕಥಾಮೃತವ ॥ ೧ ॥

ಕರಿಮುಖತ್ವದೊಳಖಿಳ ವಿಘ್ನವ।
ಪರಿಹರಿಸಿ ವಾಣೀಸ್ವರೂಪದಿ।
ಪರಮ ಶಬ್ದಾರ್ಥಗಳನೊದವಿಸಿ ಗುರುವಿನಾಕೃತಿಯ ॥
ಧರಿಸಿ ಭಕ್ತಿಜ್ಞಾನ ಸಿದ್ಧಿಯ।
ಕರುಣಿಸಿದ ಕರುಣಾಸುಧಾಸಾ।
ಗರ ವರದ ಕವಿನಾಥ ಬೆಳಗೆನ್ನಯ ಮನೋಗೃಹವ ॥ ೨ ॥

ಹಲವು ಮೂರ್ತಿಗಳಾಗಿ ಯೆನ್ನುವ।
ನೊಲಿದು ರಕ್ಷಿಸಿ ಮೂರ್ತಿಭೇದದ।
ಬಳಕೆಯೆಲ್ಲವ ನಿನ್ನೊಳಂತರ್ಭಾವವನೆ ಮಾಡಿ ॥
ಹೊಳೆವ ಚಿದಖಂಡ ಪ್ರಕಾಶದ।
ನೆಲೆಯೊಳೈಕ್ಯವನಿತ್ತು ಸಲಹಿದ।
ಸುಲಭ ಶಂಕರನಾರಾಯಣನೆ ಕೃಪಾಬ್ಧಿ ಶರಣಾಗು ॥ ೩ ॥

ವಾರಣಾಸ್ಯನೆ ಸಕಲವಿಘ್ನನಿ।
ವಾರಣಾಸ್ಯನೆ ಸಕಲಸಂಪ।
ತ್ಕಾರಣಾಸ್ಯನೆ ಜಗದುಪಾಸ್ಯನೆ ಭಕುತದಾಸ್ಯಕನೆ ॥
ವಾರಣಾಸಿಯ ವಿಶ್ವನಾಥನೆ।
ಭೂರಿದುರಿತವ ಕೊಲುವ ಧಾತನೆ।
ಕಾರಣಿಕ ಹರ ದುಂಡಿರಾಜನೆ ಮಾಳ್ಕೆ ಮಂಗಲವ ॥ ॥ ೪ ॥

ಅಕಚಟಾದಿಗಳೆಂಬ ವರ್ಣಾ ।
ಷ್ಟಕವೆತನು ವೇದಾಗಮಾದಿ ।
ಪ್ರಕರವಿಂದ್ರಿಯ ವೃಂದವೆಸವೋಂಕಾರವೇ ಹೃದಯ ॥
ಸಕಲ ವೇದಾಂತವೆ ಮುಖಾಬ್ಜ ।
ಪ್ರಕಟ ಶಬ್ದಬ್ರಹ್ಮ ವರಮಾ ।
ತೃಕಿ ಸರಸ್ವತಿ ನೀಡೆಮಗೆ ಶಬ್ದಾರ್ಥ ಕೌಶಲವ ॥ ೫ ॥

ವರತನುತ್ರಯದೊಳಗೆ ದೀಕ್ಷೆಯ ।
ನೊರೆದು ಮಂತ್ರಸುಪಿಂಡವೆಂದು ।
ದ್ಧರಿಸಿ ನರಜನ್ಮವನು ಹರಮಯವೆನಿಸಿ ಶಿವನೊಳಗೆ ॥
ಬೆರಸಿ ಹಮ್ಮನು ಮುಕ್ತಿ ಪದದೊಳ ॥
ಗಿರಿಸಿದಮಲ ಶೃಂಗಪುರ ಗುರು ।
ವರನಮೋ ಶ್ರೀರಾಮಚಂದ್ರ ಕೃಪಾಬ್ಧಿ ಸುಖಸಾಂದ್ರ ॥ ೬ ॥

ವೇದವೇದಾಂತಂಗಳರಿಯದ ।
ನಾದಿ ಶಿವನೇ ವ್ಯಾಪಕತ್ವದ ।
ಭೇದಕೋಸುಗ ವಿಷ್ಣುರೂಪದಿ ವಿಶ್ವರಕ್ಷೆಯನು ॥
ಆದರಿಸಿ ನಡೆಸುವ ವಿಲಾಸವಿ ।
ನೋದಿ ದುಃಖಚ್ಛೇದಿ ಭಕ್ತಾ ।
ಹ್ಲಾದಿ ಲಕ್ಷ್ಮೀಲೋಲ ನೋವುಗೆ ಸಕಲಸಜ್ಜನರ ॥ ೭ ॥

ಜೀವ ಸೃಷ್ಟಿಯನಾವನೊಬ್ಬನ ।
ಭಾವ ಮಾತ್ರದಿನೊಗೆದ ಪರಮೇ ।
ಷ್ಠ್ಯಾವಳಿಯೊಳೊಬ್ಬೊಬ್ಬನೇ ನಡೆಸುವರೆ ಲೀಲೆಯಲಿ ॥
ಆ ವಿರಿಂಚಿಗಣಂಗಳೊಬ್ಬುಳಿ ।
ತೀವಿದೆಡ ಬಲವಂಕವೊಪ್ಪುವ ।
ದೇವನಾದಿ ಬ್ರಹ್ಮನೀಗೆಮಗತುಲ ಸಂಪದವ ॥ ೮ ॥

ಕ್ಷುದ್ರದಕ್ಷಾಧ್ವರ ವಿನಾಶಕ ।
ರೌದ್ರ ಶಿವದೂಷಕ ಮುನೀಂದ್ರನು ।
ರೋದ್ಧತಂಶನಜಾಂಡಕೋಟಿಕಟಾಹ ಚಿದ್ಭರಿತ ॥

ಭದ್ರಕಾಯನು ಸರ್ವಭಯಸಂ ।
ಸಿದ್ಧ ಭಕ್ತರಿಗಾಗಿ ಮಂಗಳ ।
ವರ್ಧಕನು ವೀರೇಶನೀಗೆ ಮಗೊಲಿದು ನಿರ್ಭಯವ ॥ ೯ ॥

ವಾರಣಾಸಿಯ ಮಹಿಮೆಯನು ವಿ।
ಸ್ತಾರದಿಂದಲ ಗಸ್ತ್ಯನರುಹಿದ।
ತಾರಕಾಂತಕ ನಖಿಳದುಖ್ಖಾಕಾರ (?) ಸಾಕಾರ॥
ತಾರಕನು ನಿಜಭಕ್ತವೃಂದೋ।
ದ್ಧಾರಕನು ಭುವನಾಂಬಿಕಾಸುಕು।
ಮಾರಕನು ಷಣ್ಮುಖನು ಸುಖವನು ಮಾಳ್ಕಿಯೆಮಗೊಲಿದು ॥ ೧೦ ॥

ಅಗಣಿತ ಬ್ರಹ್ಮಾಂಡವನುರೋ।
ಮಗಳ ಕುಣಿಯಲಿ ತಾಳ್ದ ಹರಿಯನು।
ಹೆಗಲೊಳಾಂತುರೆ ನಿಮಿಷ ಮಾತ್ರದೊಳಖಿಳ ವಿಶ್ವವನು॥
ತಿಗುರಿಯೊಲು ತಿರುಗುವ ಗರುತ್ಮನ।
ಬಿಗುಹನುಶ್ವಾಸದಲೆ ಬಿಡಿಸಿದ।
ವಿಗಡ ನಂದೀಶ್ವರನು ಕೊಡುಗೆಮಗೀಶ ಭಕ್ತಿಯನು ॥ ೧೧ ॥

ಪುರಹರಂಗೈವಡಿಯ ತೋಜೋ।
ಭರಿತನಾ ಭೃಂಗೀಶ ರೇಣುಕ।
ಶರಣ ದಾರುಕರ ಮುಖ್ಯರಾದ ಮಹಾಗಣಾಂಬುನಿಧಿ॥
ಪೊರೆ ನಿರೂಪಾಧಿಕ ನಿರಾಮುಲ।
ನಿರತಿಶಯವೆಂದೆನಿಪ ವಿಶ್ವೇ।
ಶ್ವರನ ಭಕ್ತಿಯನೆನಗೆ ಕರುಣಿಸಿ ತಮ್ಮ ಶಿಶುವೆಂದು ॥ ೧೨ ॥

ಅನ್ನದಿಂ ಜೀವಿಸುವ ಭುವನವ।
ನನ್ನದಿಂದಲೆ ಸಲಹಿ ತಣಿಯದೆ।
ಪೂರ್ಣ ಸೌಮ್ಯಜ್ಞಾನದಿಂ ಭವನರಕವೆಂದೆಂಬ॥
ಉನ್ನತಕ್ಷುಧೆಯಿಂ ನಿವಾರಿಸು।
ವನ್ನಪೂರ್ಣೆ ಭವಾನಿ ಸುಜ್ಞಾ।
ನಾನ್ನವನು ವಿಶ್ವೇಶವಲ್ಲಭೆ ಕರುಣಿಸೆಮಗೊಲಿದು ॥ ೧೩ ॥

ಚಂದ್ರಜೂಟನ ತೂಕದಾತ್ಮಜ।
ವೃಂದವನು. ಪಡೆದೆಸಗುವತ್ಯಾ।
ನಂದವನು ವೀರೇಶ್ವರಂಗರ್ಪಿಸುತ ನಿನ್ನೊಳಗೆ
ಒಂದು ದೇಹವ ಬಿಟ್ಟು ಜೀವರಿ।
ಗೊಂದೆ ಮುಕ್ತಿಯು ನೀವ ಪರಮಾ।
ನಂದಪೂರ್ಣಜ್ಯೋತಿ ಕಾಶೀದೇವಿ ಸಲಹೆಮ್ಮ ॥ ೧೪ ॥

ಶೂಲದಿಂದಂಧಕನ ನೆಗಪಿದ ।
ಲೀಲೆಯಿಂ ಕುಣಿದಾಡಿ ದನುಜಗೆ ।
ಮೇಲೆ ಪದವಿಯನಿತ್ತ ಬ್ರಹ್ಮನ ತಲೆಯನರಿದಾತ ॥
ಕಾಲಭೈರವನಮಲ ಕಾಶೀ ।
ಪಾಲಕನು ಜನಪಕ್ಷಪಾಪ ।
ಕ್ಷಾಲಕನು ರಕ್ಷಿಸುಗೆ ಕಾಲನ ಭೀತಿಯನು ಬಿಡಿಸಿ ॥ ೧೫ ॥

ಕಾಶಿಯಂತರ್ಗೃಹದ ಪಂಚ ।
ಕ್ರೋಶ ಲಿಂಗಗಳಧಿಕ ಷಟ್ಪಂ ।
ಚಾಶದುತ್ತಮಗಣ ಪರಷ್ಟಾಪಷ್ಟಿನಗರದಲಿ ॥
ವಾಸವಾಗಿರೆ ರಂಜಿಸುವ ದೇ ।
ವೇಶಗಣಗಳು ಸಹಿತ ನೆರೆ ಸಂ ।
ತೋಷದಲಿ ನಮಗೊಲಿದು ಸುಜ್ಞಾನವನು ಕರುಣಿಪುದು ॥ ೧೬ ॥

ತುಂಗಪೂರ್ಣ ಜ್ಯೋತಿರಾತುಮ ।
ಲಿಂಗವನು ಕಾಣದರಿಗಗಣಿತ ।
ಲಿಂಗಮೂರ್ತಿಗಳಾದ ಓಂಕಾರಾದಿ ಲಿಂಗಗಳು ॥
ಜಂಗಮಸ್ಥಾವರಗಳೆಸಿಸುವ ।
ಲಿಂಗಗಳು ಕಾಶೀಪುರಸ್ಥಿತ ।
ಲಿಂಗಗಳು ಬೆಳಗುಗೆ ಮದೀಯ ಮನೋಗೃಹಾಂತರವ ॥ ೧೭ ॥

ಜಲುಮಕೋಟಿಗಳಲ್ಲಿ ಜೀವರು ।
ಗಳಿಸಿದಗ್ಗದ ಪಾಪಕರ್ಮವ ।
ತೊಳೆವ ನಿರ್ಮಲಗಂಗೆ ಮಣಿಕರ್ಣಿಕಾದಿ ತೀರ್ಥಗಳು ॥
ತೊಳೆಯಲೆನ್ನ ಜಡಾತ್ಮರಂಗ ।
ಸ್ಥಳವ ನಿರ್ಮಲನಾತ್ಮ ಶಿವನೆ ।
ನ್ನೊಳಗೆ ಹೊರಗುಜ್ವಲಿಸಿ ಬೆಳಗುವ ತೆರದಿ ಕೃಪೆಯಿಂದ ॥ ೧೮ ॥

ಶ್ರೀ ಸುಧೆಯ ಕಾಯ್ಪ್ಪಮರರಂತಿರೆ ।
ಕಾಶಿಯೆಂಬೀ ಜ್ಞಾನಘನ ಪೀ
ಯೂಷ ಸರಸಿಗೆ ಕೋಟೆಯಿಕ್ಕಿದ ತೆರದಿ ನಿಂದಿರ್ಪ ॥
ಈಶಗಣ ಕೋಟಿಗಳ ಪಂಚ ।
ಕ್ರೋಶರಕ್ಷಕಕರೀಗೆ ತೇಜೋ ।
ರಾಶಿಗಳು ನಮಗಮಲಶಾಂಭವ ಭಕ್ತಿಮಯ ಸುಖವ ॥ ೧೯ ॥

ಭರತಸುತರು ಸನತ್ಕುಮಾರರು ।
ಸುರಮುನಿ ಶ್ರೀವತ್ಸ ನಾರದ ।
ಹರವರಣ ಬಕದಾಲ್ಭ್ಯ ರೋಮಶ ಪಾದಲೋಚನರು ॥
ವರವಸಿಷ್ಠ ಮೃಕಂಡುಸುತ ಮು ।
ಖ್ಯರು ಮಹಾಷ್ಟಾ ಶೀತಿಸುಹ ಸಾ ।
ಸಿರ ಮುನೀಂದ್ರರು ವಾಲಖಿಲ್ಯರು ಮಾಳ್ಕೆಮಗೆ ಮತಿಯ ॥ ೨೦ ॥

ಶಿವನ ಹೊಗಳಿದ ದಶಪುರಾಣ ।
ಪ್ರವರ ಹರಿಯನು ನಾಲ್ಕು ಕಮಲೋ ।
ದ್ಭವನನೆರಡೊಂದರ್ಕನನು ವಹ್ನಿಯನು ಮತ್ತೊಂದು ॥
ಭುವನದೊಳು ಕೀರ್ತಿಸಿದ ನಿರ್ಮಲ ।
ಶಿವಮಯಾಷ್ಟಾದಶ ಪುರಾಣಗ ।
ಳಿವಗೆ ಕರುಣಿಸುಗೊಲಿದು ಭಕ್ತಿಸುಖಾಮೃತದ ಸವಿಯ ॥ ೨೧ ॥

ಇಂದ್ರ ದಿಕ್ಪಾಲಾದಿ ನಿರ್ಜರ ।
ವೃಂದವನು ಮುನಿಯೋಗಿ ನೆರೆ ।
ನಾಗೇಂದ್ರ ಪುಣ್ಯ ಸ್ತ್ರೀ ಪುರುಷ ಪಶು ಪಂಚಭೂತಗಳು ॥
ಚಂದ್ರ ಕುಜ ಬುಧ ಗುರು ಸಿತಾರ್ಕಜ ।
ಸಂದ ಫಣಿ ಕೇತುಗಳು ಪಿತೃಗಳು ।
ಮುಂದೆ ವಿಶ್ವೇದೇವ ವಸುಗಳು ರಕ್ಷಿಸುಗೆ ಜಗವ ॥ ೨೨ ॥

ರಾಶಿನಕ್ಷತ್ರಂಗಳವರವ ।
ರಂಶ ಲಗ್ನ ಮುಹೂರ್ತಗಳು ನೆರೆ ।
ಲೇಸೆನಿಪ ಮರದೆಸೆಗಳಗಣಿತ ಯೋಗ ಕರಣಗಳು ॥
ಆ ಸಕಲ ತಿಥಿ ವಾರ ವತ್ಸರ ।
ಮಾಸ ಋತು ಪಕ್ಷಾದಿ ಮುಖ್ಯಾ ।
ಶೇಷ ಕಾಲಾತ್ಮಕನು ಶಿವನೆಮಗೀಗೆ ಮಂಗಲವ ॥ ೨೩ ॥

ಭೂತನಾಥನ ಮೆಚ್ಚಿಸಿದ ಪೌ ।
ರಾತನರು ಶಾಂಭವರು ಧರೆಯೊಳು ।
ನೂತನದ ಶಿವಶರಣರೊಪ್ಪುವ ವರ್ತಮಾನಕರು ॥
ಭೂತಳದೊಳಿಂತಿಪ್ಪ ಭಕ್ತ ।
ವ್ರಾತವೆನ್ನನು ತನ್ನ ಶಿಶುವೆಂ ।
ದೋತು ಸಲಹುಗೆ ಭಕ್ತಿ ಶಂಭುಸುಖಾಮೃತವನಿತ್ತು ॥ ೨೪ ॥

ಹರವಿರೂಪಾಕ್ಷನ ಸುನಾಮವ ।
ಬರೆದು ಬಲ್ಲಾಳಂಗೆ ಲೆಕ್ಕವ ।
ನೊರೆದು ಭಾನುವ ನಿಲಿಸಿ ಧರೆಯನು ಸುಡುವ ಪಾವಕನ ॥
ಒರಸಿ ಪೌರಾತರ ಚರಿತ್ರವ ।
ನರುಹಿ ಜನ ಕಾಣ್ಬಂತೆ ಲಿಂಗವ ।
ಬೆರಸಿದಾ ಹಂಪೆಯ ಹರೀಶ್ವರ ದೇವಗೆರಗುವೆನು ॥ ೧೫ ॥

ವೇದಗಿರಿಗಳ ನಡುವೆ ನಾಲುಕು ।
ವೇದವನು ವೇದಾಂತ ಪೌರಾ ।
ಣಾದಿ ನಾನಾಶಾಸ್ತ್ರ ನಾನಾ ಧರ್ಮಕರ್ಮಗಳ ॥
ಮೇದಿನಿಯ ಜನಕರುಹಿ ಸಲಹಿದ ।
ಬೋಧರೂಪನು ಪೊರೆಗೆ ನಮ್ಮನು ।
ಬಾದರಾಯಣ ನೀಕೃತಿಯನೊಲವಧಿಕ ಬಲವಿತ್ತು ॥ ೧೬ ॥

ವ್ಯಾಸಮುನಿಪನ ಕರುಣವನು ಪಡೆ ।
ದೀ ಸಕಲ ಪೌರಾಣಗಳ ಪೀ ।
ಯೂಷವನು ಭವವಹ್ನಿದಗ್ಧರಿಗೊರೆದು ರಕ್ಷಿಸಿದ ॥
ಈಶಮುದ್ರಾಧರನು ಮುನಿಜನ ।
ಸಂಶಯನಿವಾರಕನು ಭಕ್ತಿಮು ।
ಹಾಸುಖವನಾ ಸೂತಪೌರಾಣಿಕನು ಕೊಡುಗೆಮಗೆ ॥ ೧೭ ॥

ಭುವನಜನ ಬಾಹ್ಯಾಂಧಕಾರವ ।
ತವಿಸಿ ತಣಿಯದೆ ಯಂತರಂಗೋ ।
ದ್ಭವದ ವರಮಹಾಂಧಕಾರವ ಕೆಡಿಸಬೇಕೆಂದು ॥
ಶಿವಕಥೆಯನಾದಿತ್ಯ ಪೌರಾ ।
ಣವನು ಮನುವಿಗೆ ಪೇಳ್ದ ಸಾಕ್ಷಾ ।
ದ್ಭುವನ ಬಾಂಧವ ಭಾನು ಬೆಳಗುತ್ತಿರ್ಕೆ ಮನ್ಮನವ ॥ ೧೮ ॥

ನೀರಮಳಲಿನ ಮುಗನ ಮುಗನ ಕ ।
ಠೋರಶಸ್ತ್ರಕ್ಕೆದೆಯನೊಡ್ಡಿದ ।
ಸಾರಥಿಯನೊಡೆಯೆಚ್ಚು ಬಲ್ಮೆಯ ಮೆರವನಾ ತಾಯ ॥
ಕ್ರೂರಶಾಪದಿ ತಲೆಯ ನೀಗಿದ್ನ ।
ವೀರನಣ್ಣನ ಹಿರಿಯಗೊಲಿದಾ ।
ಹಾರಪಾತ್ರೆಯನಿತ್ತ ದೇವರದೇವ ಸಲಹೆಂದ ॥ ೧೯ ॥

ತಾನರಿವ ನೆವದಿಂದ ತತ್ವ ।
ಜ್ಞಾನವನು ತತ್ಸಾಧನಗಳನು ।
ದಾನಧರ್ಮವ್ರತ ತಪೋನುಷ್ಠಾನಮಾರ್ಗವನು ॥
ಸ್ವಾನುಭಾವ ನಿರೂಪ ಭಕ್ತಿ ।
ಸ್ಥಾನವನು ಧರೆಗುರುಹಿದಾ ವರ ।
ಭಾನುಸುತ ನಮಗೀಗೆ ವೈವಸ್ವತನು ಮಂಗಲವ ॥ ೩೦ ॥

ಈಶ ಕವಿ ಯುದ್ಭಟನು ಬಾಣ ।
ವ್ಯಾಸ ಬಿಲುಹಣ ಶುಕ್ರ ಕಾಳೀ ।
ದಾಸ ಕುವರವ್ಯಾಸ ಪೌರಾತ ಕವೀಶ್ವರರು ॥
ಭಾಸುರದ ನೂತನ ಕವೀಶರು ।
ಲೇಸೆನಿಸಿ ನೀವ್ಸವಿದ ಶಬ್ದಮು ।
ಹಾಸುಧೆಯೊಳೊಂದಿನಿತ ನೀವುದು ತನಗೆ ಕರುಣದಲಿ ॥ ೩೧ ॥

ರವಿಯೊರೆದನಾದಿತ್ಯಪೌರಾ।
ಣವನು ಮನು ವೈವಸ್ವತಗೆಶಾಂ ।
ಭವ ಮಹಾಪರತತ್ವ ಭೋಧೆಯನಿದನು ಋಷಿಗಳಿಗೆ ॥
ಶಿವಶರಣ ಭಕ್ತರಿಗೆ ಪೇಳಿದ ।
ನವನಿ ಹಿತವೆನೆ ಸೂತನಿದನುಸು ।
ರುವೆನು ಶಿವನೆನ್ನೊಳಗೆ ಕರುಣಿಸಿದಂತೆ ಶುಭಕರವ ॥ ೩೨ ॥

ಮುದಮಿಗುವೊಲಾದಿತ್ಯ ಪೌರಾ ।
ಣದಲಿ ಸಾರವನುಳಿದ ಪೌರಾ ।
ಣದ ಕಥಾ ಸಾರದಲಿ ಕೆಲವನು ಕೂಡಿ ಸಂಗ್ರಹಿಸಿ ॥
ಮದನಹರ ಸಂಪ್ರೀತಿಗೋಸುಗ ।
ವಿದನು ವಿಸ್ತರಿಸುವೆನು ಮಾಡುವ
ಮದುವೆಗೆಲ್ಲರು ನೆರದಡತಿ ಮಾಂಗಲ್ಯವೆಂತಂತೆ ॥ ೩೩ ॥

ಪೇಳುವುದು ತಪ್ಪಿದಡೆ ತಿದ್ದುವು ।
ದಾಲಿಸುವುದೊರೆದರ್ಥವನು ಸತಿ ।
ಬಾಲಮೂಢಾದ್ಯರಿಗೆ ಸವಿಯನು ತೋರಿ ಬಲ್ಲವರು ॥
ಬಾಲಕನು ನಿಮಗಾನು ತೊದಲಿನ ।
ಬಾಲವಚನಕೆ ತಂದೆ ಮುದ್ದಿಸು ।
ವೋಲು ಸೂರಿಜನಂಗಳಂಗೀಕರಿಸಿ ಕೃಪೆಯಿಂದ ॥ ೩೪ ॥

ಕಾಳಿದಾಸಾದಿಗಳ ಕೃತಿಗಳ |
ನೇಳಿಸುವರಿನ್ನುಳಿದ ಕಾವ್ಯವ |
ನೇಳಿಸರೆ ದುರ್ಜನರವರ್ಕಳ ಮಾತದಂತಿರಲಿ ||
ಕೇಳಿ ಕಾಲಕೆ ತಕ್ಕ ತೆರದಿಂ |
ಶೂಲಿಯೆನ್ನೊಳು ಪೇಳ್ದನಿದನೊಲಿ |
ದಾವಿಸುವದಿಹ ಪರದ ಪರಮಾನಂದ ಸಾಂದ್ರವನು || ೩೫ ||

ಶಬ್ದಮಣಿ ಮೊದಲಾದ ಶಾಸ್ತ್ರದ |
ಹೊದ್ದಿಗೆಯು ಸಾಹಿತ್ಯಕಲ್ಲದೆ |
ಶುದ್ಧ ಷಟ್ಪದಿ ಹಾಡುಗಬ್ಬಗಳಿಂಗೆ ಬೇಡೆಂದು ||
ಸಿದ್ಧನೂತನ ಕವಿಗಳುಸುರಿದ |
ಪದ್ಧತಿಯೊಳಾನೆಡಹಿ ಬೀಳುತ |
ಬುದ್ಧಿಯರಿವಂತೊರೆವೆನೀ ಬೆಳ್ನುಡಿಯ ಬೆರಕೆಯಲಿ || ೩೬ ||

ಹಾಳೆ ಬಾಳೆಯ ದೊನ್ನೆಯಾದರೆ |
ಹಾಲ ಸವಿಕೆಟ್ಟಪುದೆ ಮತ್ಕವಿ |
ತಾಲಪಿತ ಲಕ್ಷಣಗಳಲ್ಲದೆ ಯಿದರೊಳೆಸೆದಪ್ಪ ||
ಸ್ಥೂಲಧರ್ಮ ರಹಸ್ಯವಳಿವುದೆ |
ಹಾಳು ಕವಿತೆಯಿದೆಂದು ನೋಡಡೆ |
ಲಾಲಿಸಿದಡಿಹ ಪರಕೆ ಬಹುಪುರುಷಾರ್ಥವುಂಟೆಂದ || ೩೭ ||

ಕೇಳುವನಿತೇ ಹೊತ್ತು ಬಹಳ ವಿ |
ಶಾಲಶುಭವುಂಟುಳಿದ ಕೃತಿಯೊಳು |
ಕೇಳುವಾ ಸುಖವಿಲ್ಲಿಯೊಂದಿದರೊಳಗೆ ಸುಲಭದಲಿ ||
ಸ್ಥೂಲ ಧರ್ಮವ ಗಳಿಸುವಾ ಸುಖ |
ಮೇಲೆ ಪದವಿಯನೈದುವಾ ಸುಖ |
ಲೋಲಮುಕ್ತಿಯ ಪಡೆವ ಘನಸುಖವಧಿಕವೀಕೃತಿಯ || ೩೮ ||

ಪಾತಕದ ಪಂಜರವನುರುಹಲು |
ಪ್ರೇತ ಚೋರಾದಿಗಳನಟ್ಟಲು |
ಘಾತಿಸುವ ಭವನರಕದಿಂದುದ್ಧರಿಸುವರೆ ಕುಲವ ||
ಭೂತಳದೊಳಿಹ ಸುಖವ ಪಡೆವಡೆ |
ಭೂತನಾಥನೊಳೈಕ್ಯ ವಡೆಯಲು |
ಪ್ರೀತಿಯಿಂದಾಲಿಸುವುದಾತ್ಮಹಿತಾರ್ಥಸ್ವಾರ್ಥವನು || ೩೯ ||

ಶಿವಕಥಾಮೃತವೆಂಬ ಹೆಸರೀ |
ಶಿವಕಥೆಗೆ ಮಂಗಲಕೆ ಮಂಗಲ |
ಭವಜರಾಮಣಾರ್ತಿಯೆಂಬುದರಿಂದ ಮೇದಿನಿಗೆ ||
ಶಿವನು ಕಾಶೀಪತಿಯು ನಾಯಕ |
ನವರಿವರ ನುಡಿಯಲ್ಲ ಶಿವನೇ |
ಕವಿಯೆನಲು ಕೇಳ್ದವರ ಭಾಗ್ಯಕೆ ಪಡಿಯೆ ಜಗದೊಳಗೆ ||೪೦||

ಭಾಮಿನಿಯ ಷಟ್ಪದಿಯ ರೂಪದಿ |
ನೀ ಮಹಾ ಶಾಂಭವರಹಸ್ಯ ಕ |
ಥಾಮೃತಾಂಬುಧಿಯುಕ್ಕಿ ಬರುತಿದೆ ಮೇರೆಯನು ಮುರಿದು ||
ಭೂಮಿಯೊಳು ಮುಳುಗಾಡುವವರಿಗೆ |
ಕಾಮಹರ ಪದವಿಹಪರದಿ ನಿ |
ಸ್ಸೀಮ ಭಾಗ್ಯರವರ್ಗೆ ನಮಿಸುವೆನಧಿಕ ಭಕ್ತಿಯಲಿ ||೪೧||

ಆರುಕಾಲುಗಳಿಂದ ನಡೆವಳು |
ಮೂರು ಹಜ್ಜೆಗಳಿಂದ ರಂಜಿಸಿ |
ಸಾರಿ ಡಂಗುರ ಹೊಯ್ಸಿ ಕವಿಗಳಿಗಾನೆ ನೆರವೆಂದು ||
ತೋರದುಕ್ತಿಯನಧಿಕ ವೇಗದಿ |
ತೋರಿ ಸೊಬಗನು ಬೀರಿ ಸುಖವನು |
ಸೂರೆಗೊಟ್ಟಳು ಕೇಳ್ದರಿಗೆ ಕೃತಿಭಾಮಿನೀರನ್ನೆ ||೪೨||

ಪದುಮಜೋದ್ಭವ ಪ್ರೀತೆ ಮತಿಯುತೆ |
ಮೃದುತರ ದ್ರಾಕ್ಷಾಸುಪಾಕದೆ |
(ಗದಿತ) ಸುಕೋಮಲೆ ಜಾಣೆ ದೇಸಿಯಲಿ ಬೆಳ್ನುಡಿಗಳಲಿ ಗೀರ್ವಾಣಿ ||
ವಿದಿತ ಭಾಷಾ ತ್ರಯದಿ ಪಂಡಿತ |
ಹೃದಯ ಮೋಹಿಸೆ ಸಕಲ ಧರ್ಮಾ |
ಭ್ಯುದಯದಿಂ ಸಿರಿವಂತೆಯೊಪ್ಪಿದಳಿಂತು ಕೃತಿರಮಣಿ ||೪||

ಯೋಗಿಗಳಿಗಿದು ಮುಕುತಿ ಲಕುಮಿಾ |
ಯೋಗ ಭಕ್ತರಿಗಮಲ ಪದವಿಯ |
ಭೋಗ ಕರ್ಮಿಗೆ ನಾಕಸುಖವನು ರಾಗಸಿದ್ಧಿಯನು ||
ಯಿಾಗಳೈಹಿಕ ಭಾಗ್ಯ ಸುಖದು |
ದ್ಯೋಗ ನೊಂದರಿದಖಿಳ ದುಃಖ |
ತ್ಯಾಗವೆನಲೀ ಶಿವಕಥಾಮೃತ ಕಾವ್ಯ ರಂಜಿಸಿತು ||೪೪||

ಈ ತೆರದ ಬಹುಮೂರ್ತಿನಾಮು ।
ವ್ರಾತದಿಂ ವಾಕ್ಪುಷ್ಪದಿಂದಾ ।
ಜ್ಯೋತಿಯೊಂದೇ ಪೂಜೆಗೊಂಡುದದೈಸೆಯೆನ್ನಿಂದ ॥
ಜ್ಯೋತಿಯನು ಸಂಪೂರ್ಣ ಸಂವಿ ।
ಜ್ಞೋತಿಯನು ವಿಶ್ವೇಶ ಲಿಂಗ ।
ಜ್ಯೋತಿಯನು ಬಲಗೊಂಡು ತೊಡಗಿದೆನೀಮಹಾಕೃತಿಯ ॥೪೫॥
ಖ್ಯಾತಿಪೂಜಾ ಲಾಭವೆಂಬವು ।
ಭೂತಪತಿ ನಿಮಗೈಸೆ ಪೂರ್ಣ ।
ಜ್ಯೋತಿಯೆನಿಸುವ ನಿಮ್ಮ ಭಕ್ತಿಸುಖಾಮೃತವ ನಮಗೆ ॥
ಮಾತು ಬೇರಿನ್ನಿಲ್ಲ ಮಾಯಾ ।
ತೀತ ಪೂರ್ಣಜ್ಯೋತಿಯೊಳ ಹೊರ ।
ಗೋತು ನೆಲೆಗೊಂಡಿಹುದು ಕರುಣಿಸು ವಿಶ್ವನಾಥಶಿವ ॥೪೬॥

ಇಂತು ಒಂದನೇ ಸಂಧಿ ಮುಗಿದುದು

(ಎರಡನೇ ಸಂಧಿ)

ಭಾ॥ ಷ॥ ನೈಮಿಷದಿ ವರ ಶೌನಕಾದ್ಯರು ।
ಸೋಮಪಾನದಿ ದೀರ್ಘ ಸತ್ರವು ।
ಹಾಮಖವ ಹನ್ನೆರಡು ವರುಷವು ನಡೆಸುತದರೊಳಗೆ ॥
ಶ್ರೀಮದಷ್ಟಾದಶ ಪುರಾಣ ।
ಸ್ತೋಮ ಕಥೆಗಳ ಕೇಳ್ವ ನೆವದಲಿ ।
ಭೂಮಿ ಜನವನು ಹೊರವರಲ್ಲಿಗೆ ಸೂತನೈತಂದ ॥೧॥
ತೋರಿದೆಮ್ಮಯ ಸಂಶಯಕೆ ।
ಪರಿಹಾರವಿಲ್ಲದೆ ನಿಮ್ಮ ಬರವನೆ ।
ಹಾರುತಿದ್ದೆವು ನಮ್ಮ ಪುಣ್ಯವೆ ಕರೆದುತಂದುದಲಾ ॥
ಚಾರು ಪೌರಾಣಿಕ ಶಿರೋಮಣಿ ।
ಕಾರಣಿಕಯೆಂದಖಿಳ ಋಷಿಗಳು ।
ಸೇರಿ ಕುಳಿತರು ಚಂದ್ರಮಗೆ ಪರಿವೇಷವಾದಂತೆ ॥೨॥
ಇಂದು ಹೇಳಿದ ಬಳಿಕ ಮತ್ತಿ ।
ನ್ನೊಂದು ಸಂಶಯ ಪುಟ್ಟಿದಂತಿದೆ ।
ನಿಂದ ಸಿದ್ಧಾಂತವನೆ ಹೇಳೆಂದೆಂಬ ಮುನಿಗಳಿಗೆ ॥
ವಂದಿಸುತ ಬಿನ್ನವಿಸಿದನು ನಿಮ ।
ಗಿಂದು ಸಿದ್ಧಾಂತವನೆ ಪೇಳ್ವಗ ।
ಕೊಂದು ಸಂಶಯವುಂಟು ಹೇಳಲು ಬಾರದದನೆಂದ ॥೩॥

ಸೃಷ್ಟಿಯನು ಮಾಡೆಂದು ಎನ್ನನು ।
ಹುಟ್ಟಿಸಿದರರಿದಂತೆ ಮಾಡಿದ ।
ಸೃಷ್ಟಿ ಶೈವಜ್ಞಾನ ಬಲದಿಂ ಮುಕ್ತಿಯನೆ ಪಡೆದು ॥
ಕೆಟ್ಟುದಾ ಶಿವತತ್ವದಿಂ ಮತಿ ।
ನಿಷ್ಠೆಯಾಗದವೋಲು ಮಾಡಿನೆ ।
ಸೃಷ್ಟಿಸಿದನಖಿಳಾಗಮಂಗಳ ಭೇದವನು ಗಿರಿಶ ॥ ೪ ॥

ವಿಧಿಯ ಬಿನ್ನಹಕಾಗಿ ಶಿವನೊ ।
ಡ್ಡಿದನು ಬಹು ಭೇದಾಂಧಕಾರವ ।
ನದರಿನೆಲ್ಲರು ನಿಜವನರಿಯದೆ ತನುಗೆ ತೋರಿದುದೆ ॥
ಅಧಿಕವೆಂದುಳಿದುದನು ಜರಿವುತ ।
ಕುದಿದು ನರಕಕೆ ಬಿದ್ದು ಭವಸಂ ।
ಗದಲಿ ಬರುತಿಪುದೇನನೆಂಬೆನು ಮೂಢಮಾನವರು ॥ ೫ ॥

ಇದರ ಮೂಲವಿದೆಂದರಿದ ಸ ।
ದ್ಹೃದಯರಿಗೆ ಶಿವತತ್ವ ನಿಶ್ಚಲ ।
ವೊದಗಲೆಂದಜನೊಡನೆ ಶಿವನ ನಿರೂಪವಾಯ್ತೆಂದು ॥
ಇದರ ಹೃದಯವನರಿದು ನೀವ್ ಕೇ ।
ಳಿದಿರಲಾ ಪೇಳುವೆನು ಜಗದ ।
ಭ್ಯುದಯವನು ನಿಮಗೆಂದು ಗುರುವನು ನೆನೆದನಾ ಸೂತ ॥ ೬ ॥

ಚಿತ್ತವಿಸಿ ಮುನಿಗಳಿರ ಮೆರೆವಾ ।
ದಿತ್ಯನಾಮ ಪುರಾಣವನು ಶಿವ ।
ತತ್ವದಿಂದ ಸದಾಶಿವನು ಮತ್ತೀ ಸದಾಶಿವನ ॥
ಚಿತ್ತದಿಂದೀಶ್ವರನು ಈಶನ ।
ಗಾತ್ರದಿಂ ಶ್ರೀರುದ್ರಹರಿಯಜ ।
ರುತ್ತವಾಗಿಯೆ ಜನಿಸಿದರು ಕ್ರಮದಿಂದಲಾದಿಯಲಿ ॥ ೭ ॥

ವಿಧಿಯ ಮನದಿ ಮರೀಚಿಮುನಿ ಜನಿ ।
ಸಿದನು ತನ್ಮುನಿಯಿಂದ ಕಶ್ಯಪ ।
ನುದಿಸಿದನು ಕಶ್ಯಪಗೆ ದಿತಿಯೊಳಗೊಗೆದನೀ ಜಗದ ॥
ಪುದಿದ ಘೋರತಮಿಸ್ರವೆಲ್ಲವ ।
ಸದೆದು ಬೆಳಗುವ ಚಿತ್ಪ್ರಕಾಶ ।
ಪ್ರದನೆನಿಸುವಾದಿತ್ಯನಖಿಳ ಸ್ತೋತ್ರ ಸತ್ಪಾತ್ರ ॥ ೮ ॥

ರವಿಗೆ ಸಂಜ್ಞಾದೇವಿಯಲಿ ಸಂ ।
ಭವಿಸಿದನಲಾ ಶ್ರಾದ್ಧದೇವನು ।
ವಿವರಿಸಲು ವೈವಸ್ವತಾಖ್ಯಯನಾಕುಮಾರಕನ ॥
ವಿವಿಧ ಗುಣಶೀಲಂಗಳನು ಕಂ ।
ಡವಿರಳಾನಂದದಲಿ ಕಮಲೋ ।
ದ್ಭವನು ಮನುಪಟ್ಟವನು ಕಟ್ಟಿದನಖಿಳಜನ ಹೊಗಳೆ ॥ ೯ ॥

ಆ ಮಹಾವೈವಸ್ವತೋತ್ತಮನು |
ನಾಮ ಮನುರಾಜೇಂದ್ರನಾಳುವ |
ಭೂಮಿ ತಾನೈವತ್ತುಕೋಟಿಯ ಯೋಜನಗಳೆಸೆಯೆ ||
ಕಾಮಧೇನುವಧೋಮುಖದಿ ದಿ |
ವ್ಯಾಮೃತಾದಿಯ ಕರೆವುತಿರ್ದೊಲಿ |
ಳಾಮಹಿಳೆ ಮೇಲ್ಮೊಗದಿ ಕರೆದಳು ಫಲರಸಾಮೃತವ ||೧೦||

ಮಂಗಲಕೆ ಮಂಗಲ್ಯವೆನಿಪ ಧ |
ರಾಂಗನೆಯ ಮಣಿಮಕುಟವೆನಲು |
ತ್ತುಂಗಮೇರುಮಹಾದ್ರಿಯಖಿಳ ಜಗಂಗಳರ್ಚಿಸುವ ||
ಲಿಂಗವೆನಲುದಯಾರ್ಕಮಂಡಲ |
ದಂಗವೇ ತ್ರೈಲೋಕ್ಯಕಾಶ್ರಯ |
ರಂಗವೆನಲೊಪ್ಪಿದುದು ಜಂಬೂದ್ವೀಪ ಮಧ್ಯದಲಿ ||೧೧||

ಆಗಿರೀಂದ್ರಂಗೆಸವ ದಕ್ಷಿಣ |
ಭಾಗದಲಿ ನಾನಾ ನರಾಮರ |
ಭೋಗ ಯೋಗಾಶ್ರಯವೆನಿಪ್ಪ ನದೀನದಾದ್ರಿಗಳು |
ರಾಗ ಪುಣ್ಯಕ್ಷೇತ್ರ ಲಿಂಗನು |
ಹಾಗರುವ ಮಹತೀರ್ಥಗಳ್ಸಸ |
ಸ್ಯಾಗಮದೊಳೆಸೆದಿತ್ತು ಭಾರತವರುಷವೆಂಬವನಿ ||೧೨||

ಇಂತೆಸೆವ ಭಾರತಮಹಾಭೂ |
ಕಾಂತೆಗೊಪ್ಪುವ ವಿಮಳತರ ಸೀ |
ಮಂತಮಣಿಯೋ ಶುಭದ ಕಣಿಯೋ ಸುಖದ ತಿಂತಿಣಿಯೋ ||
ಎಂತು ಮತ್ತೆನಬಾರದಿದನೆಂ |
ಬಂತೆ ಗೌತಮಿಯೆಂಬ ಗಂಗಾ |
ಪ್ರಾಂತ್ಯದೊಳಗೆಸದುದು ಪ್ರತಿಷ್ಠಾನಾಹ್ವಯದ ನಗರಿ ||೧೩||

ಅಲ್ಲಿ ಮನುರಾಜೇಂದ್ರ ಶಿವಪದ |
ಪಲ್ಲವದ ಪೂಜೆಯಲಿ ಶಾಸ್ತ್ರದೊ |
ಳುಳ್ಳ ಧರ್ಮಾಧರ್ಮ ರಕ್ಷಾಶಿಕ್ಷಕತ್ವದಲಿ ||
ಸಲ್ಲಲಿತ ಲೋಕತ್ರಯಂಗಳೊ |
ಳೆಲ್ಲವನು ಪಾಲಿಸುತ ಶ್ರದ್ಧಾ |
ವಲ್ಲಭಾನ್ವಿತನಾಗಿ ಮೆರೆದನು ಬಹಳ ವಿಭವದಲಿ || ||೧೪||

ಭಾನುನಂದನನೆನಿಪ ಮನು ಸಂ ।
ತಾನವಿಲ್ಲದೆನೊಂದು ಪರಮ ।
ಜ್ಞಾನಿಯಪ್ಪ ಗುರೂತ್ತಮನ ಮುಖದಿಂದ ತಾನರಿದು ॥
ತಾನೆ ಮೈತ್ರಾವರುಣಿಯೆಶ್ಶಿಯ ।
ಸಾನುರಾಗದಿ ಮಾಡುತಿರೆ ತ ।
ನ್ಮಾನಿನಿಯು ಬೇರೊಂದ ನೆನೆದಳು ತನ್ನ ಮನದೊಳಗೆ ॥ ೧೫ ॥

ಪುತ್ರಿಯನು ಬಯಸುತ್ತ ಕಾಮಿನಿ ।
ಮತ್ತೆ ಹೋತೃವ ಕರೆದು ಮನ್ಮನ ।
ದರ್ಥವನು ಸಲಿಸೆನಲು ಪುತ್ರಾಕ್ಷರದ ಬಲದಲ್ಲಿ ॥
ಪುತ್ರಿಯುದಿಸಲು ಕಂಡು ಮನುರಾ।
ಜೋತ್ತಮನು ಚಿಂತಿಸಲು ನಿನ್ನಯ।
ಮತ್ತಕಾಶಿನಿ ಬಯಸಿದಂತಾಯ್ತೆಂದು ಗುರು ನುಡಿದ ॥ ೧೬ ॥

ಎತ್ತಿದನು ಬಾಲೆಯನು ನಿನ್ನಯ।
ಪುತ್ರಿಯನು ಪುರುಷನನು ಮಾಡುವೆ ।
ನಿತ್ತ ನೋಡೆಂದೀಶ ನಂಘ್ರಿಯ ಕುರಿತು ತಪವಿರ್ದು ॥
ಭಕ್ತಿಯಲಿ ಮೆಚ್ಚಿಸಲು ಪುತ್ರಿಯೆ ।
ಪುತ್ರನಾದನು ಮೂರು ಜಗಕಿದು ।
ಚಿತ್ರವೆನೆ ಸುದ್ಯುಮ್ನನೆಂದಾಯ್ತಾತಗಭಿಧಾನ ॥ ೧೭ ॥

ಮೂರು ಜಗದ ವಿಚಾರವನು ಮಿಗೆ ।
ಚಾರುಮನು ಪುತ್ರರಿಗೆ ಧರೆಯವಿ ।
ಚಾರವಾ ಸುದ್ಯುಮ್ನಗದರಿಂದಿಳೆಯ ಪಾಲಿಸುತ ॥
ಧಾರುಣಿಯೊಳಂದೊಮ್ಮೆ ನಿಜಪರಿ ।
ವಾರ ಸಹಿತವೆ ಬೇಂಟೆಯಾಡುತ।
ಮೇರುವಿನ ತಪ್ಪಲಿಗೆಯಾ ಸುಕುಮಾರಕಂ ನಡೆದ ॥ ೧೮ ॥

ಅಲ್ಲಿಗೈತಂದವನಿಪತಿ ದಳ ।
ವೆಲ್ಲ ನಾರಿಯರಾಗೆ ಕೇಳಿದ ।
ರೆಲ್ಲ ಋಷಿಗಳು ಸೂತನನು ಸತಿಯಾದರೇಕೆನಲು ॥
ಅಲ್ಲಿ ಶಿವಗಿರಿಜೆಯರ ಕೇಳೀ ।
ಸಲ್ಲಲಿತವನವಾರು ಹೊಕ್ಕರೆ ।
ವಲ್ಲಭೆಯರಾಗಲ್ಕೆ ಶಿವನ ನಿರೂಪವುಂಟೆಂದ ॥ ೧೯ ॥

ಮುನಿಯ ಭಜನೆಗೆ ಮೆಚ್ಚಿ ಕಾತ್ಯಾ|
ಯನಿಯ ಪತಿ ವೈದೋರಿ ತಿಂಗಳು
ವನಿತೆಯಾಗಿರಲೊಂದು ತಿಂಗಳು ಪುರುಷನಾಗಿರಲು ||
ಮುನಿಪ ಕೇಳೆಂದಾಗ ನೇಮಿಸೆ |
ವನಿತೆಯಿಳೆಯೆಂಬಾಕೆಯಾಗುತ |
ಮನುಜ ಪತಿ ಸದ್ಯುಮ್ನನಾಗುತ್ತಾಳಿದನು ಧರೆಯ || ೨೦ ||

ಒಂದು ಮಾಸವೆಯಾದಡೀ ಮಗ |
ನಿಂದು ರಾಜ್ಯವನಾಳುತಿರೆ ಸಾ |
ಕೆಂದು ವೈವಸ್ವತನು ಸುಖವಿರಲಾ ಕುಮಾರಂಗೆ ||
ನಂದನರು ಗಯ ವಿಮಲರುತ್ಕಲ|
ರಂದು ಜನಿಸಿದರವರ್ಗೆ ಗಯೆಯಸು|
ಮುಂದಣುತ್ಕಲದೇಶವನು ದಕ್ಷಿಣವನೊಲಿದಿತ್ತ || ೨೧ ||

ಇಳೆಯೆನಿಪ ತನ್ನಲ್ಲಿ ಬುಧನಿಂ |
ದೊಲಿದು ಪುಟ್ಟಿಪುರೂರವನು ಮಂ |
ಗಳ ಚರಿತ್ರದೊಳಾಡುತಿರೆ ಸಂತೋಷ ಮನದಿಂದ ||
ಕೆಲವು ದೇಶವನಿತ್ತು ಮನದೊಳ |
ಗಳುಕಿ ಹೆಣ್ಣುತನಕ್ಕೆ ತಪದಿಂ |
ದೊಲಿಸಿದನು ಪರಮುಕುತಿಲಕ್ಷ್ಮಿಯ ಶಿವನ ಕೃಪೆಯಿಂದ || ೨೨||

ಮುಕ್ತಿಯನು ಸುದ್ಯುಮ್ನನೈದಲು |
ಪುತ್ರರಿಲ್ಲದೆ ಮನುಕುಲೇಂದ್ರನು |
ಚಿತ್ತದಲಿ ವೈರಾಗ್ಯತಪದಿಂದೊಲಿಸಿದನು ಶಿವನ ||
ಪುತ್ರರೆನಿಸಿಕ್ಷ್ವಾಕು ಮುಖ್ಯರು |
ಹತ್ತು ಮಂದಿಗಳುದಿಸಲೆಲ್ಲ ಧ |
ರಿತ್ರಿಯನು ಕೈಗೊಳಿಸಿ ಪೂಜಿಸಿಕೊಂಡನವರಿಂದ || ೨೩ ||

ಮನುಪದವಿ ಹೆಚ್ಚೆಂದು ಹೇಳುವ |
ಜನವನಿನ್ನೇನೆಂಬೆ ಬೊಮ್ಮನ |
ದಿನದೊಳಗೆ ಹದಿನಾಲ್ಕು ಮಂದಿಗೆ ಮಗುಳೆ ಪಂಚತ್ವ ||
ಅನಿಬರೊಳಗಾನೊಬ್ಬ ನೆನ್ನಯ |
ದಿನವದೆರಡೇ ಗಳಿಗೆಯದರೊಳ |
ಗೆನಗೆ ಮುಕ್ಕಾಲ್ಗಳಿಗೆ ಸಂದುದು ಹೇಳಲೇನೆಂದ || ೨೪ ||

ತನ್ನಯಧಿಕಾರವನು ನಡೆಸಲು ।
ತನ್ನ ಮಕ್ಕಳನಿರಿಸಿ ತಾನು ಮ ।
ಹೋನ್ನತದ ವೈರಾಗ್ಯದಲ್ಲಿ ಪುರವರವ ಹೊರವಂಟು ॥
ಮನ್ನಣೆಯ ವಚನವಲಿ ಪೌತ್ರನ ।
ಮನ್ನಿಸುತ ಶಕ್ರಾದಿ ಸುರರಿಗೆ ।
ತನ್ನಭೀಷ್ಟವ ನರುಹಿ ಕಾಮ್ಯಕವನಕೆ ನಡೆತಂದ ॥ ೫ ॥

ಆ ಸಮಯದಲಿ ಶಬ್ದವಾಯ್ತಾ ।
ಕಾಶದಲಿಯಷ್ಟಾಂಗ ಯೋಗದಿ ।
ಲೇಸೆನಿಸಿ ನೀವ್ ತಪವ ಮಾಡಿಯೆನಲ್ಕದನು ಕೇಳಿ ॥
ಭಾಸುರಾರ್ತ ಕ್ಷೇತ್ರಕೈದಿದ ।
ನಾ ಸಕಲ ಮುನಿಜನ ಸಹಿತ ಪವ ।
ನಾಶನದಿ ಮಾಡಿದರು ತಪವನು ಭಜಿಸಿ ಭಾಸ್ಕರನ ॥ ೬ ॥

ಭಾನು ಪ್ರೈದೋರಿದನು ತತ್ವ ।
ಜ್ಞಾನಮಯ ನೊಲಿದಾತ್ಮ ತೇಜದೊ।
ಳೀ ನಿಖಿಲಜಗವಡಗೆ ಪೂರ್ಣ ಜ್ಯೋತಿ ರೂಪದಲಿ ॥
ಏನು ಬೇಕೆಲೆ ಕಂದ ಮುನಿಗಳಿ ।
ರೇನ ಬಯಸಿದನೀವೆನೆಂಬ ಕೃ ।
ಪಾನಿಧಿಯ ಕಾಣುತ್ತ ಜಯ ಜಯವೆನುತಲೆರಗಿದರು ॥ ೭ ॥

ಈ ಮಹಾಮುನಿಗಳಿಗೆ ಮುನಿ।
ಮತ ವೇ ಮಹಾದುಃಖಾಬ್ಧಿಸಿದ್ಧಿಯ ।
ಕಾಮಿತಕೆ ಬಿಡವದುವೆ ಭಗವನ ದುಃಖಹೇತುವಲಾ ॥
ಈ ಮುನೀಶರಿಗೆನಗೆ ದುಃಖದ ।
ಸೀಮೆ ಬಿಡುವಂತಮಲ ಮುಕ್ತಿ ।
ಶ್ರೀಮುಖದ ಸ್ವಾದನದ ಸಿದ್ಧಿಯ ನೀವುದೊಲವಿಂದ ॥ ೮॥

ಓರಣದ ವಿಶ್ವಪ್ರಪಂಚವು ದಾರ।
ಹುಸಿಗಡ ಯಿದಕೆಯೊಂದಾ ।
ಧಾರ ಉಂಟು ಗಡದರ ರೂಪವಗವ್ಯ ಗಡವದರ ॥
ಕಾರಣವನೆಮಗರುಹಿ ಜಡ ಸಂ ।
ಸಾರ ಶರಧಿಯ ದಾಂಟಸೈ ಕರು ।
ಣಾರಸಾಮೃತ ಶರಧಿಯೆಂದೆರಗಿದನು ದೈನ್ಯದಲಿ ॥ ೯ ॥

ಎಂದು ಮುನಿಗಳು ಸಹಿತ ಚಲಿಸದೆ ।
ನಿಂದು ಭಕ್ತಿಯೊಳೆರಗಿ ನುಡಿವಾ ।
ಕಂದನನು ಬೋಳೈಸಿ ಮುನಿಗಳ ಸಹಿತ ಪಡಿದೆತ್ತಿ ॥
ಕಂದ ಬಾರೈ ಪುತ್ರತಿಲಕಾ ।
ಕಂದ ಬಾರೈ ಸಫಲವೆನ್ನಯ ।
ತಂದೆ ತನವೆಂದಪ್ಪಿ ಮೈದಡವಿದನು ಕಮಲ ಸಖ ॥ ೩೦ ॥

ಒರೆಯ ಬೇಡವೆ ನಿಮಗೆ ಸಾಕ್ಷಾ ।
ತ್ಪರಮತತ್ವವನಾ ಮಹಾಶ್ರುತಿ ।
ಶಿರಗಳೊರೆದರ್ಥವನು ಮಿಕ್ಕಾಗಮ ಪುರಾಣಗಳು ॥
ಒರೆದ ವಾಕ್ಯಗಳರ್ಥವಾದಗ ।
ಳರಿವರಿಂಗದು ಪಕ್ಷಪಾತಕ ।
ವೊರೆವೆನೈ ಪ್ರಭುಸಮ್ಮತವನರಿವಂತೆ ನಿಮಗಿಂದು ॥ ೩೧ ॥

ಕರಣವಿಂದ್ರಿಯ ದೇಹ ಸಚರಾ ।
ಚರದ ಜಾಲವು ವಹ್ನಿ ಮರುದಂ ।
ಬರಗಳಾಹ ಮಹತ್ತು ಮಾಯಾ ಪುರುಷ ಕಲ್ಪನೆಯ ॥
ಒರಸಿ ತುರ್ಯಾತೀತ ಸಾಕ್ಷಾ ।
ತ್ಪರಮ ಪೂರ್ಣಾನಂದ ಸಾಂದ್ರ ।
ಸ್ಫುರಿತ ತೇಜಃಪುಂಜ ಶಿವ ತಾನಿರ್ದನಾದಿತ್ಯ ॥ ೩೨ ॥

**ಇಂತು ಎರಡನೇ ಸಂಧಿ ಮುಗಿದುದು**



# ಕನ್ನಡ ಆದಿತ್ಯ ಪುರಾಣ

## (ನೂರನೆಯ ಸಂಧಿ)

ಸೂಚನೆ॥ ಕರುಣಿಸಿದನಾತ್ಮಜಕೆ ಸಾಕ್ಷಾ ।
ತ್ಪರನು ಸಿದ್ಧಾಂತವನು ವಿಶ್ವೋ ।
ದ್ಧರಣ ಕಾರಣನರ್ಕನಾ ಶಿವತತ್ವ ನಿರ್ಣಯವ ॥

ಭಾ॥ಷ॥ ಕೇಳು ವೈವಸ್ವತನೆ ಹೇಳುವ ।
ನಾಲಗೆಯ ಮಧುಸಾರಗಳ ನೊಲಿ ।
ದಾಲಿಸುವ ಕರ್ಣಾಮೃತವನರಿವನು ಭವಾಮೃತವ ॥
ಹೇಳಿ ಕೇಳ್ವವರಿಂಗೆ ಗೋಚರ ।
ಕಾಲ ಕಲ್ಪನವಿಲ್ಲದಮಲ ವಿ ।
ಶಾಲ ಚಿದಖಂಡಮೃತವ (ೕ) ದೊಂದುಂಟು ಶಿವತತ್ವ ॥೧॥

ತನ್ನನರಿವಡೆ ತಾನೆ ಸಾಧನ ।
ವಿನ್ನು ಬೇರೊಂದಿಲ್ಲ ತಾನೇ ।
ಪೂರ್ಣತೇಜಃ ಪುಂಜವಿಂತಂತೆಂಬ ಕುರುಹಿಲ್ಲ ॥
ತನ್ನ ತಾನೇ ಬೆಳಗಿ ತನ್ನೊಳು ।
ತನ್ನ ತಾನೇ ಥಳಥಳಿಸಿ ಹೊಳೆ ।
ವುನ್ನತ ಜ್ಯೋತಿಸ್ವರೂಪವದೆಂದನಾದಿನಪ ॥ ॥೨॥

ದೀವಿಗೆಯದೊಂದೆಸೆಯಲಿರ್ದಡೆ ।
ದೀವಿಗೆಯ ಬೆಳಕೆಲ್ಲದೆಸೆಗಳ ।
ನಾವರಿಸಿಯಿಹುದದರ ತೆರನೆನಬಾರದದನಿನ್ನು ॥
ದೀವಿಗೆಯ ಬೆಳಕೆಲ್ಲ ತಾನೇ ।
ದೀವಿಗೆಯದಾದಂತೆಬೆಳಗೂ ।
ದಾ ವಿಶಾಲಬ್ರಹ್ಮವದಕುಪಮಾನವಿಲ್ಲೆಂದ ॥೩॥

ಆ ಶಿವನ ಲಯತತ್ವದೊಳಗಂ ।
ಶಾಂಶದಿಂ ಸುಳಿದಡಗುವೀ ಪ್ರಾ ।
ದೇಶವಂಕುರಿಸಿತ್ತು ಪೂರ್ಣವದೆನಲು ಬೇಕಾಯ್ತು ॥
ಭಾಸಿಯಾದವು ಹೆಸರು ಕುರುಹಿನ ।
ಲೇಸುಕಾಣದ ವೇದಗಳು ಹರಿ ।
ಭಾಸಮಾನ ಬ್ರಹ್ಮವದು ನಿಶ್ಯಬ್ದ ಕೇಳೆಂದ ॥೪॥

ಅಲ್ಲಿ ಮೂಲಪ್ರಕೃತಿ ತಾ ಮೊದ ।
ಲಿಲ್ಲ ಪೂರುಷನಿಲ್ಲ ಮಹದಹ ।
ಮಿಲ್ಲ ಗಗನಾದ್ಯಖಿಳ ಭೂತದಜಾಂಡ ತತಿಯಿಲ್ಲ ॥
ಸೊಲ್ಲಿಸುವರಳವಲ್ಲ ಬರಿಮಾ ।
ತಲ್ಲ ಕುರುಹದಕಿಲ್ಲ ಕಲ್ಪಿಸ ।
ಲಿಲ್ಲ ದುಪನಿಷದರ್ಥ ವೊಂದುಂಟಬಲ ಕೇಳೆಂದ ॥೫॥

ಶರಧಿವೊಲು ಶಿವಲಿಂಗವಲ್ಲಿಯ ।
ತೆರೆಗಳೂಲು ಜಗವೆಂಬ ಮಾತಿಗೆ ।
ಶರಧಿಯಿಂ ಮೇಲಿಹುದು ತೆರೆಗಳು ಬೊಮ್ಮದಿಂ ಮೇಲೆ ॥
ಪರಿಕಿಸಲು ಜಗವಿಹುದೆ ಶಿವನೊಳು ।
ಕರಣ ವಿಕೃತಿಯದ್ವೈಸೆ ಬೊಮ್ಮಕೆ ।
ಶರಧಿ ತೆರೆಗಳ ಹೋಲಿಸಲು ದೃಷ್ಟಾಂತವಲ್ಲೆಂದ ॥೬॥

ವಾರಿಧಿಯೆ ದೃಷ್ಟಾಂತವೆಂಬರು ।
ಚಾರುತತ್ವಕ್ಕೇಕದೇಶದ ।
ವಾರಿನಿಧಿ ದೃಷ್ಟಾಂತವೇ ಪರಿಪೂರ್ಣ ವಸ್ತುವಿಗೆ ॥
ಆರುವನು ಕಣದವರ (ಕುಳಿಯನು ।
ಮಾರಿ) ಹಿಡಿಹಿಡಿದತ್ತರೆಂಬ ವಿ ।
ಚಾರವಲ್ಲದೆ ಬೊಮ್ಮಕೀ ದೃಷ್ಟಾಂತವಲ್ಲೆಂದ ॥೭॥

ಗಗನವದು ಘಟಮಠಗಳಲಿ ಭೇ ।
ದಗಳನಾಂತ ವೋಲಾತ್ಮನೀ ದೇ ।
ಹಗಳೊಳಿಹನೆಂಬಲ್ಲಿವೊಪ್ಪ ( ) ಕೊರತೆಯಿಲ್ಲವದು ॥
ಗಗನದಲಿ ಪೂರ್ಣತೆಯನಂತ ।
ತ್ವಗಳು ಘಟಿಸುವವಾಗಿ ಶಿವನೀ ।
ಗಗನದಂತಿಹ ನೆನ್ನಬಹುದೊಮ್ಮಿಂಗೆ ಕೇಳೆಂದ ॥೮॥

ಆದರೀ ದೃಷ್ಟಾಂತವೆಂಬೀ ।
ಹಾದಿಕೇವಲ ವಲ್ಪಫಲವುಂ ।
ಟಾದಿಯಲಿ ಧೂಳಕ್ಷರಂಗಳ ಬರೆದು ಪುಸ್ತಕವ ॥
ಆದರಿಸಿ ಬರೆವಂತೆ ಯಿದರಿಂ ।
ದಾದ ಕಿಂಚಿದ್ಧ್ಯಾನಯೋಗದಿ ।
ನೈದೆ ಪೂರ್ಣಜ್ಞಾನವಹುದು ನಿರರ್ಥವಲ್ಲೆಂದ ॥೯॥

ತತ್ವದೊಳು ತಾನಿರ್ದು ಪರಶಿವ।
ತತ್ವದಾಧಾರದಲಿ ನಟಿಸುವ।
ಶಕ್ತಿ ಮೂಲಪ್ರಕೃತಿಯರಿಯಳು ಗಡ ! ನಿಜಾರ್ಥವನು ॥
ಶಕ್ತಿ ವಿಕರಿಸಲಿಲ್ಲ ತೋರಿದ ।
ಯುಕ್ತಿ ದೃಷ್ಟಾಂತಂಗಳಲಿ ಬಲ ।
(ವೆತ್ತಸ) ಚಿದಾನಂದ ನಿಜಪರಿಪೂರ್ಣವಸ್ತುವನು ॥೧೦॥

ಶೈವವದು ಶಿವನೆಂದು ವೈಷ್ಣವ ।
ಜೀವಿಗಳು ಹರಿಯೆಂದು ತಮತಮ ।
ಗಾವ ದೇವರ ಭಕ್ತಿಯುಂಟಾ ದೇವರೆಲ್ಲವರು ॥
ಆ ವಿಶೇಷ ಬ್ರಹ್ಮವೆಂದೇ ।
ಭಾವಿಸುವರಂತಪ್ಪ ಚಿದಖಿಂ ।
ಡಾವಬೋಧ ಜ್ಯೋತಿಯೇಂ ಶಿವತತ್ವ ಕೇಳೆಂದ ॥೧೧॥

ಅದುಕಣಾ ಪ್ರಕೃತಿಯನು ಹೊದ್ದದೆ
ಯದಕೆ ತಾನಾಧಾರವಾಗಿ
ಪ್ಪಧಿಕ ವಿಮಲಬ್ರಹ್ಮವದು ಶಿವತತ್ವ ಪರವಸ್ತು ॥
ಇದನರಿವ ಮಾತ್ರದಲಿ ಮುಕ್ತ್ಯ।
ಭ್ಯುದಯವಿದು ಹೊರತಾದವೆಲ್ಲವು ।
ಪದವಿಮಾತ್ರಗಳಿದುವೆ ತತ್‌ಪರವಸ್ತು ನಿರ್ದೇಶ ॥೧೨॥

ಅದುವೆ ನಿರ್ಗುಣ ಲಿಂಗವದು ಶಿವ ।
ನದುವೆ ತಾನೇ ವಿಷ್ಣು ತತ್ವದ ।
ಹೃದಯವದನರಿದರ್ಥನೇ ಪರಮಾತ್ಮಲಿಂಗೈಕ್ಯ ॥
ಅದನರಿದುದೇ ಮುಕ್ತಿ ಮಿಕ್ಕಿನ ।
ಪದವಿಯೂ ಮಾತುಗಳ ನಂಬದೆ ।
ಯಿದನು ಸಾಧಿಸಿ ನಡೆವರೆಲ್ಲವನುಳಿದು ಯೋಗಿಗಳು ॥೧೩॥

ಅದರಿನದನೇ ತಿಳಿದ ಮಾತ್ರ ।
ಕ್ಕದು ಮುಕುತಿಯತ್ಯಾಂತಿಕದಲಿ ।
ಯದು ಮಗನೆ ಕೇಳಿನ್ನು ಸದ್ಗುರುವರನ ಕೃಪೆಯಿಂದ ॥
ಅದನರಿಯ ಬೇಕೈಸೆಯೆಂದ ।
ತ್ಯಧಿಕ ಶಿವತತ್ವ ಸ್ವರೂಪದ।
ಹದನನೊರೆದನು ವಸ್ತುನಿರ್ದೇಶಾಖ್ಯ ದೇಶದಲಿ ॥೧೪॥

ಭುವನದೊಳಗಿಹ ವಸ್ತುನಿರ್ದೇ |
ಶವನು ತಿಳಿದೊಂದುವ ಮಹಾತ್ಮಗೆ |
ದಿವಿಜಗಿವಿಜರ ಪದವಿಗಿದವಿಯ ಮಾತದೇಕಿನ್ನು ||
ಶಿವನೊಳೈಕ್ಯವ ಪಡೆವ ನರಿದ |
ರ್ಥವನು ನಾಲುಕು ಸಾಧನವನು |
ಳ್ಳವರಿಗರುಹುವುದಿದನು ವಿಶ್ವೇಶ್ವರನ ನಿಜಪದವ ||೧೫||

**ಇಂತು ಮೂರನೆಯ ಸಂಧಿಯು ಮುಗಿದುದು.**

(ನಾಲ್ಕನೇ ಸಂಧಿ)

ಸೂಚನೆ॥ ವರಸದಾಶಿವ ತತ್ವವೆನಿಸುವ |
ಪರಮು ಸಬಲ ಬ್ರಹ್ಮವನು ವಿ |
ಸ್ತರಿಸಿದನು ಮನುವಿಂಗೆ ವಿಶ್ವಾಧಾರ ಕಾರಣವ ||

ಭಾ॥ಷ॥ ಈ ತೆರದಿನಾ ಬ್ರಹ್ಮಶಿವತ |
ತ್ವಾತಿಶಯವನು ಬೋಧಿಪರ್ಕನ |
ಮಾತಡಗಿ ಕರಣಂಗಳೆಲ್ಲವು ಬಟ್ಟಬಯಲಾಗಿ ||
ಜ್ಞಾತೃ ತುರ್ಯಗಳಿಳಿದು ತುರ್ಯಾ |
ತೀತವನು ಕಳೆದುಳಿದಖಂಡ |
ಜ್ಯೋತಿಚ್ಛೈತನ್ಯಾತ್ಮ ಶಿವ ತಾನಿರ್ದನಾ ದ್ಯುಮಣಿ ||೧||

ಜಯ ನಮೋ ಬ್ರಹ್ಮಾಮೃತಾತ್ಮಕ |
ಜಯ ನಮೋ ಬ್ರಹ್ಮಾಮೃತಾಂಬುಧಿ |
ಜಯ ನಮೋ ಬ್ರಹ್ಮಾಮೃತಪ್ರಿಯಯೆಂದು ಹೊಗಳುತಿರೆ ||
ನಿಯಮಗಳ ಸಂಸಾರಯೆಚ್ಚರಿ |
ಕೆಯನು ಹುಟ್ಟಿಸಿ ಕಣ್ದೆರದು ನಿಜ |
ನಯನದಾನಂದಾಶ್ರು ಪೂರದೊಳಾಳುತಿಂತೆಂದ ||೨||

ಗುರುವರನೆ ಗುರುಮುಖ್ಯ ಸಾಕ್ಷಾ |
ದ್ಗುರು ಕುಲಾಗ್ರಣಿ ನಿಜನಿರೂಪದಿ |
ಪರಮತತ್ವಾಮೃತವ ನುಂಡುಂಡದರ ಸವಿಗಂಡು ||
ತಿರುಗಿದುದು ಮತಿ ಬೊಮ್ಮದೊಳು ಮ |
ತ್ಕರಣವಳಿದೊಡನೇಳದಂತಿರೆ |
ಕರುಣೆಸೆಂಡೆರೆಗಿದನು ಮುನಿಗಳು ಸಹಿತ ಮನುನಾಥ ||೩||

ಎತ್ತಿದನು ಕರಕಮಲದಿಂದೇ ।
ಳ್ಪುತ್ರ ಮುನಿಗಳಿರೇಳಿ ಪರಶಿವ ।
ತತ್ವವನು ನಿಮಗೊರೆದ ಬಳಿಕೇನುಂಟು ಹೇಳುವಡೆ ॥
ವಸ್ತುವೊಂದೇಯಲ್ಲದೆರಡನೆ ।
ಯರ್ಥವೆಂದೂವಿಲ್ಲ ತೋರ್ಪ ಜ ।
ಗತ್ತಿನಿಪ್ಪುದು ಬಿಸುಲುದೊರೆಯಂಬಂತೆ ಪುಸಿಯೆಂದ ॥ ೪ ॥

ಹೊಸಘೃತವೆ ನವನೀತವಾಯಿತು ।
ಮೊಸರೆನಿಸಿತಾ ಬೆಣ್ಣೆ ಮತ್ತಾ ।
ಮೊಸರು ಹಾಲಾಯ್ತೆಂಬ ತೆರದಿಂ ಬ್ರಹ್ಮವದುತಾನೆ ॥
ವಸಕದಿಂ ಬಹುಮೂರ್ತಿಯಾಯಿತು ।
ಸಸಿನೆ ಜಗವಾಯ್ತೆಂಬುದಾಗಿದೆ ।
ಹುಸಿಯೊ ದಿಟವೋ ಮಾಯೆಯೆಂಬುದು ನೋಡಿಕೊಳ್ಳೆಂದ ॥ ೫ ॥

ಎಂದಡೆಲೆ ಗುರುನಾಥ ನೀವಾ ।
ನಂದ ಸಿಂಧುವೆಯಾದ ಕಾರಣ ।
ವೊಂದೆಯಲ್ಲದೆ ಯೆರಡು ತೋರದು ನಿಮಗೆ ನಾನಕಟ ॥
ಮಂದಮತಿಯದರಿಂದ ಮಾಯಾ ।
ಬಂಧಕವ ತೋರುತ್ತಲಿದೆ ಸುಖ ।
ಸಿಂಧು ತೋರದು ನಮಗೆ ಗತಿಯೇನೆಂದಡಿಂತೆಂದ ॥ ೬ ॥

ಬಳ್ಳಿಯನು ಕಾಣುತ್ತ ಹೊವೆಂ ।
ದೆಲ್ಲವರು (ತೊ)ಡುವೋಲು ಕೊರಡನು ।
ಕಳ್ಳನೆಂದತ್ತಿತ್ತ ಹರಿವಂತಾಯ್ತು ನಿಮ್ಮರಿಕೆ ॥
ಇಲ್ಲವಾದೀ ಜಗವು ಮೊದಲೇ ।
ಯಿಲ್ಲ ವುಂಟೆಂದೆನಿಸಿ ತೋರಲ ।
ದೆಲ್ಲ ಕರಣಭ್ರಾಂತಿಯದು ತಾ ಮಾಯೆ ಹುಸಿಯೆಂದ ॥೭॥

ಅದರಿನೀ ಮನವುಳ್ಳದೀ ಜಗ ।
ವುದಿಸುವುದು ಮನವಳಿಯಲಳಿವುದು ।
ವಿದಿತವೀ ಮನವಾವುದೆನೆ ಮಾಯಾ ವಿಕಾರವಿದು ॥
ಅದನರಿವಡಮಲಾತ್ಮ ಹುಸಿ ಕೇ ।
ಳದಕೆ ತಾಯ್ ಹುಸಿಯಾಗೆ ಸೂನುಗ ।
ಳುದಿಸಲುಂಟೇ ಮಾಯೆ ಜಗಮನವೆಲ್ಲ ಹುಸಿಯೆಂದ ॥೮॥

ನಿನ್ನ ಮತಿಯನು ತಿಳುಹಲೋಸುಗ ।
ಪೂರ್ಣಶಿವನೊಳು ಮಾಯೆಯುಂಟೆಂ ।
ದೆನ್ನಬೇಕಾಯ್ತುದಕೆಯೆಲ್ಲಿಯು ಮಾಯೆ ಬೊಮ್ಮದೊಳು ॥
ಎನ್ನದಿರು ನಾವ್ ಹೇಳಿದರ್ಥವ ।
ನಿನ್ನೊಳಗೆ ಯೊಡಬಟ್ಟೆಯಾದರೆ ।
ನಿನ್ನ ನಾನೊಡಬಡಿಸಿ ಭ್ರಾಂತಿಯ ತೊಲಗಿಸುವೆನೆಂದ ॥೯॥

ಬೊಮ್ಮವಿಲ್ಲದೆ ಹೇಳ್ವ ಬೋಧೆಗ ।
ಳೊಮ್ಮೆ ಹುಸಿಯಾ ಮಾಯೆಯದನೊ ।
(ಮ್ಮೆಮ್ಮೆ) ನೀ ನಹುದೆಂದೆಯಾದೊಡೆ ಮುಂದೆ ಬೋಧಿಸಲು ॥
ನಿಮ್ಮ ಮನಮೆಚ್ಚುವುದಲೇ ಪ್ರಭು ।
ಸಮ್ಮತಂ ಶ್ರುತಿವಚನವದನೇ ।
ನೆಮ್ಮಿ ನಂಬಿದಡಾಯ್ತು ಶಿವನೊಳು ಬೆರಸಬಹುದೆಂದ ॥೧೦॥

ಮುಳ್ಳನಾಮುಳ್ಳಿಂದ ತೆಗೆವೋಲ್ ।
ಕಳ್ಳರಿಂ ಕಳ್ಳರನೆ ಪಿಡಿವೋಲ್ ।
ಬಳ್ಳಿ ಕಾಯ್ ಸೊಪ್ಪುಗಳಿಗೊನೆವಾ ವ್ಯಾಧಿಗಳನಿನ್ನು ॥
ಬಳ್ಳಿ ಕಾಯ್ ಸೊಪ್ಪೆಂಬ ಮದ್ದುಗ ।
ಳಲ್ಲಿ ಬಿಡಿಸುವ ತೆರದಿ ಮಾಯೆಯ ।
ಘೆಲ್ಲಣೆಯನಾ ಮಾಯೆಯಿಂ ಬಿಡಿಸುವೆನು ಕೇಳೆಂದ ॥೧೧॥

ಎನಲು ಬಿನ್ನೈಸಿದನು ನೀವಿಂ ।
ದೆನಗೆ ವೇದಾಂತವನೆ ಬೋಧಿಸಿ ।
ಮನವಡಗಿ ಮುತ್ತುಳಿವ ದೇಹಾದ್ಯಖಿಳ ವಿಕೃತಿಗಳು ॥
ಜನಿಸದಂತಿರೆ ಮಾಡಬೇಕೆಂ ।
ದೆನುತಯೆರಗಲು ಭಲರೆಯೆಂದಾ ।
ತನುಜನನು ಬೋಳೈಸಿ ಮಗುಳಿಂತೆಂದನಾ ದಿನಪ ॥೧೨॥

ಆದಿಸಂವಿಚ್ಛಕ್ತಿಯೊಗೆದಾ ।
ಚ್ಛಾದಿಸಿದಳಾ ಶಿವನ ನೆಂದೀ
ವೇದಶಿರಗಳು ನುಡಿದೊಡದನೊಡಬಡಲು ಬೇಕಾಯ್ತು ॥
ಆದಿವಸ್ತುಗೆ ಪೂರ್ಣಗೊಂದಾ ।
ಚ್ಛಾದಕವು ಮಗುಳುಂಟೆ ನಭವನು ।
ನೈದುವನು ವಸ್ತ್ರದಲಿ ಮುಚ್ಚಲು ಬಹುದೆ ಕೇಳೆಂದ ॥ ೧೩ ॥

ಸ್ಫುರಿತ ರವಿಕಾಂತದಲಿ ಭಾನು ।
ಸ್ಫುರಣವಾದಂತಾದಿ ಶಿವೆಯೊಳು ।
ಬೆರಸಿ ಹೊಳೆದುದು ತೋರದಾ ಚೈತನ್ಯ ತೋರಿತಲಾ ॥
ಶರಧಿ ನಭದೊಳಗಿರಲು ನಭವಾ ।
ಶರಧಿಯೊಳಗಿಪ್ಪಂತೆ ಸಂವಿ ।
ತ್ತರಣಿಯೊಳು ಥಳಥಳಿಸಿ ಹೊಳವುತ್ತಿರ್ದುದಾ ಬ್ರಹ್ಮ ॥ ೧೪ ॥

ಕುಂದದಾನಂದಾಬ್ಧಿ ಶಿವಗಾ ।
ನಂದವಾನೆಂಬರಿಕೆ ಹುಟ್ಟಿದು ।
ಬಂದ ಸಂವಿಚ್ಛಕ್ತಿಯಿಂದಾನಂದವಾನೆಂಬ ॥
ಒಂದರಿಕೆ ಹುಟ್ಟುವುದು ನಿದ್ರಾ ।
ನಂದದಿಂ ತನುವೆದ್ದ ಬಳಿಕಾ ।
ನಂದದಿಂ ಮಲಗಿರ್ದೆನೆಂದರಿವಂತೆ ಕೇಳೆಂದ ॥ ೧೫ ॥

ಶಕ್ತಿಯಾಚ್ಛಾದಿಸಿದಳಾ ಶಿವ ।
ತತ್ವವನ್ನು ಪ್ರಸಾದ ಬೀಜ ಮ
ಹಾರ್ಥವೆಂಬಾ ಬ್ರಹ್ಮ ಹನ್ಮೆಂದರಿತುದದರಿಂದ ॥
ಉಕ್ತವಾದ ಸದಾಶಿವಾಮಲ ।
ತತ್ವವಾಯಿತು ಬರಿಯ ಬೆಳಗಿನ ।
ಮೊತ್ತವದು ರೂಪಲ್ಲ ಪೂರ್ಣಜ್ಯೋತಿ ಕೇಳೆಂದ ॥ ೧೬ ॥

ಜ್ಯೋತಿಯಾಗಿಯೆ ತೋರ್ಪುದಾ ವಿ ।
ಖ್ಯಾತಶಕ್ತಿಯದಕ್ಕೆ ಯಾದಾ ।
ರಾತಿಶಯ ಸುಖಜ್ಯೋತಿಯೇ ಶಿವತತ್ವ ಚೈತನ್ಯ ॥
ಜ್ಯೋತಿಯೊಳು ಸುಜ್ಯೋತಿಯದು ಭಿ ।
ನ್ನಾತುಮನೆ ಶಿಖಿದಾಹಕತ್ವದ ।
ಮಾತಿನಂತಿರಭಿನ್ನ ಶಿವಶಿವೆಯರಿಗೆ ಕೇಳೆಂದ ॥ ೧೭ ॥

ಮಂಗಲವೆ ತಾನಾದ ಪರಶಿವೆ ।
ಯಂಗ ಸಂಗದಿನಾದುದಂದುಶಿ ।
ವಂಗೆ ಮೆರೆವ ಸದಾಶಿವತ್ವದ ತತ್ವವತಿಶುಭದ ॥
ತುಂಗ ಶಿವ ತತ್ವವನು ತಾನೇ ।
ಹಿಂಗದೈದಿಪುದರಿದುದಾದುದು ।
ಲಿಂಗವೆಂಬಭಿಧಾನಮಮಲ ಸದಾಶಿವಾಹ್ವಯಕೆ ॥ ೧೮ ॥

ಅದು ಸುಗುಣವೆನೆ ಮೂರ್ತಿಭೇದಾ ।
ದಿಗಳಿದಕ್ಕಿಲ್ಲಮಲ ಪರಿಪೂ ।
ರ್ಣದ ಮಹಾಪ್ರಭೆಯೆನಿಸಿ ತೋರ್ಕೆಗೆ ಬಂದ ಮಾತ್ರದಲಿ ॥
ಅದು ಸಗುಣ ನಿರ್ಗುಣವು ಭಾವಿಸ ।
ಲದುವೆ ನಿರ್ಗುಣವೈಸೆ ಸಂದೇ ।
ಹಗಳ ಮಾಡಲು ಸಲ್ಲದದು ಬರಿಬೆಳಗು ಕೇಳೆಂದ ॥ ೧೯ ॥

ಆದುರಂತ ಜ್ಯೋತಿಯನು ಕಾ ।
ಣ್ಬಾದಿ ಮೂರ್ತಿಗಳಿಲ್ಲ ಯೀಶ್ವರ ।
ನಾದಿರುದ್ರ ಮುಕುಂದ ಪರಮೇಷ್ಠಿಗಳ ಸುಳುಹಿಲ್ಲ ॥
ಆದಿಕಾರ್ಯಗಳೆನಿಸುವೀ ಮಹ ।
ದಾದಿ ತತ್ವಗಳಿಲ್ಲ ನಿರ್ಮಲ ।
ಬೋಧ ಲಿಂಗಜ್ಯೋತಿಯೊಂದೇ ಪೂರ್ಣವಾಗಿಹುದು ॥ ೨೦ ॥

ಧರಣಿಯೆಲ್ಲವು ಬೆಳಗು ಜಲಶಿಖಿ ।
ಮರುತು ನಭಗಳು ಬೆಳಗು ಬಹಿರಾ ।
ವರಣವೀ ಬ್ರಹ್ಮಾಂಡಕೋಟಿಗಳೆಲ್ಲ ಬರಿಬೆಳಗು ॥
ಚರಿಪ ಲೋಕಾಲೋಕ ಸಚರಾ ।
ಚರವಿದೆಲ್ಲವು ಬೆಳಗದಲ್ಲದೆ ।
ಪರಿಕಿಸಲು ಜಗವಾಗಿ ತೋರ್ಪ ವಿಕಾರ ಹುಸಿಯೆಂದ ॥ ೨೧ ॥

ಬ್ರಹ್ಮ ಶಿವ ಚೈತನ್ಯವೆಂಬುದ
ಗಮ್ಯವದು ದುರ್ಲಕ್ಷ್ಯ ಸಬಲ ।
ಬ್ರಹ್ಮವೆನಿಸಿಪ್ಪೀ ಸದಾಶಿವ ತತ್ವನನು ನೆನೆದು ॥
ಬ್ರಹ್ಮದಲಿ ಕೂಡುವರದಕ್ಕೀ
ರಮ್ಯರಿಂಗಾ ಧ್ಯಾನವತಿ ಸುಲ
ಭಂ ಮಹಾಶಿವಯೋಗವಿದನಾಚರಿಸು ನೀನೆಂದ ॥ ೨೨ ॥

ಧ್ಯಾನಿಸುವಡೆ ಜ್ಞಾತೃವನು ಸಂ
ಧಾನವನು ಮಾಡುವುದಕೀ ಸು
ಜ್ಞಾನಲಿಂಗವೆ ಬೇಕಾದನು ಮನವಿಟ್ಟು ಸಾಧಿಸಲು ॥
ಜ್ಞಾನ ನಿರ್ಮಯ ವಸ್ತು ಶಿವನೇ
ತಾನುಹನು ನೀನದರಿನನು ಸಂ
ಧಾನವನು ಮಾಡೆಂದನಾ ದಿನಮಣಿಯು ನಸುನಗುತ ॥ ೨೩ ॥

ಎಲ್ಲವಕೆ ದೇಹಾಭಿಮಾನವೆ ।
ಕೊಲ್ಲಗೊಲೆಯನು ಕೊಲುವುದದರಿಂ ।
ವಲ್ಲಭಾಸುತಧನಗೃಹಕ್ಷೇತ್ರಾದಿ ಪಾಶಗಳು ॥
ಬಳ್ಳಿವರಿದವು ಕಟ್ಟಿ ಕೆಡಹುವ ।
ವಲ್ಲಿಯತ್ರಿತ್ರಲುಗದಂತಿರೆ।
ಬಲ್ಲವರು ದೇಹಾಭಿಮಾನವ ಬಿಡಲು ಬೇಕೆಂದ ॥ ೧೪ ॥

ಹರಚರಣ ಭಕ್ತಿಯಲಹಂಕೃತಿ ।
ಹರಿವುದಾಜ್ಞಾನಕೃತಿಯೊಳಾತ್ಮ ।
ಸ್ಫುರಣವನುಸಂಧಾನವಪ್ಪುದು ಕಾಮಕಲೆಯೆಂಬ ॥
ತರುಣಿ ಭಕ್ತಿಯ ಭರದಿ ತಾ ಶಿವ ।
ಭರಿತ ತೇಜೋದಿವ್ಯಲಿಂಗದ ।
ದರುಶನದಿ ಲಿಂಗೈಕ್ಯವಡೆಯೆಲೆ ಮಗನೆ ಕೇಳೆಂದ ॥ ೧೫ ॥

ಪುತ್ರ ಕೇಳು ಸದಾಶಿವಾಹ್ವಯ ।
ತತ್ವದಲಿ ಬೆರಸಿದ್ದ ಮಾಯಾ ।
ಶಕ್ತಿಯಂತಃಕರಣ ತತ್ವವೆನಿಪ್ಪ ಸಂಜ್ಞೆಯನು ॥
ಹೊತ್ತೊಯ್ದು ಪಾಲಾದಳಾ ಜ್ಞಾ
ತತ್ವ ಮನ ಮತಿ ಚಿತ್ತಹಮ್ಮಿನ ।
ವೃತ್ತಿಯಾಯ್ತಿದದಕ್ಕೈದು ಹೆಸರಾಯ್ತೊಂದು ಕರಣಕ್ಕೆ ॥ ೧೬ ॥

ಜ್ಞಾತೃವೀ ಮನ ಮನದಿ ಮತಿ ವಿ ।
ಖ್ಯಾತ ಮತಿಯಿಂ ಚಿತ್ತ ಚಿತ್ತದಿ ।
ನೋತಹಂಕೃತಿಯಾಯ್ತು ಶಿರದಿಂ ಮುಖಶಿರಾ (ದಿ)ಗಳು ॥
ಜಾತವಾದಂತಭ್ರುವಭ್ರುದಿ ।
ವಾತ ವಾತದಿನಗ್ನಿಯಗ್ನಿಯ ।
ರೇತದಿಂ ಜಲ ಜಲದಿ ಧಾರುಣಿ ಪುಟ್ಟದಂದದಲಿ ॥ ೧೭ ॥

ಜ್ಞಾತೃತನವನು ಪಡೆದಡದರೊಳ ।
ಗೋತಹಂಕೃತಿ ಚಿತ್ತಮತಿ ವಿ ।
ಖ್ಯಾತಮನಲಗು ತಮ್ಮ ತಮ್ಮಯ ವಿಷಯಗಳು ಸಹಿತ ॥
ಜ್ಞಾತೃವಿನ ಒಳಗಡೆಗೆ ಮಗುಳಾ ।
ಜ್ಞಾತೃವುಳಿಪನು ಭೂತಜನದಾ ।
ವಾತವಡಗಲು ಗಗನದೊಳಗಾ ಗಗನವುಳಿವಂತೆ ॥ ೧೮ ॥

ತಿಳಿವಡಾ ಜ್ಞಾತೃತ್ವವೇ ನಿ ।
ರ್ಮಲ ಮಹಾಸಾಧಕವತೀಯದ ।
ನೆಲೆಗೊಳಿಸಿ ನಿಶ್ಚಲದಿನನುಸಂಧಾನವನು ಮಾಡೆ ॥
ತೊಲಗಿಯೊ ಜ್ಞಾತೃತ್ವ ಶಿವನೊಳ ।
ಗಳಿದು ಹೋಹುದು ನೀನೆ ಶಿವನಾ ।
ಗುಳಿವೆ ಪೂರ್ಣಜ್ಯೋತಿ ಕಾರಣದಲ್ಲಿ ಕೇಳೆಂದ ॥ ೨೯ ॥

ಕಾಶಿಲಿಂಗಜ್ಯೋತಿ ಜಡರಿಗೆ ।
ಭೂಸತೀ ರೂಪದಲಿ ತೋರಲು ।
ಭಾಸುರಾತ್ಮ ಜ್ಯೋತಿಯಲ್ಲದೆ ನಿನ್ನ ಜಡಮತಿಗೆ ॥
ಶ್ರೀ ಸ್ವಯಂ ಜ್ಯೋತಿ ಸ್ವರೂಪದ ।
ಭಾಸ ಜಗದಾಕಾರವಾಗಲಿ ।
ದೇ ಸಹಜ ತಾನದುವೆ ಪೂರ್ಣಜ್ಯೋತಿ ಕೇಳೆಂದ ॥ ೩೦ ॥

ಭೀತರಿಗೆ ಭೂತಗಳ ಮಯ ಕಾ ।
ಮಾತುರಗೆ ಕಾಮಿನಿಯ ಮಯದ
ರ್ಥಾತುರಂಗಿ (ಹು) ದಧಿಕಮಯವೀ ಲೋಕವಾದಂತೆ ॥
ಕೌತುಕದ ನಿಜ ಮನಕೆ ವಿಕೃತಿ ।
ವ್ರಾತಮಯ ತಾನ್ಯೆಸಿ ಕೇಳವ ।
ಧೂತಕರಣಕೆ ಪೂರ್ಣಸಂವಿಜ್ಯೋತಿ ಕೇಳೆಂದ ॥ ೩೧ ॥

ಆದರ ಶತಕೋಟ್ಯಂಶದಿಂದಲೆ ।
ಯುದಿಸಿದುತ್ತಮ ಕಾಶಿಲಿಂಗದ ।
ತುದಿ ಮೊದಲ ನೀಕ್ಷಿಸಲು ಹಂಸವರಾಹ ರೂಪದಲಿ ॥
ವಿಧಿಮುಕುಂದರು ಹೋಗಿ ಕಡೆಗಾ ।
ಣದೆ ಮುರಿದರಿನ್ನೀ ಮಹಾಲಿಂ ।
ಗದ ನೆಲೆಯನರಿವವರದಾರೈ ಮಗನೆ ಕೇಳೆಂದ ॥ ೩೨ ॥

ಮತ್ತೆಯಂತರ್ಯಾಮಿ ಪಂಚಕ ।
ಮೂರ್ತಿ ಪಂಚ ಬ್ರಹ್ಮ ಪಂಚಕ ।
ಛತ್ರಿ ಶಕ್ತಿಯ ಗುಣವೆಯೇಕಾದಶ ಮಹಾತತ್ವ ॥
ಉಕ್ತವಪ್ಪ ತ್ರಿಂಶದಾಖ್ಯೆಯ ।
ಹೊತ್ತ ಕಳೆಗಳು ಶಿವನ ಮೇಧಾ ।
ಶಕ್ತಿ ಶಬ್ಧಬ್ರಹ್ಮವೆನಿಸುವ ಮಾತೃಕಾದಿಗಳು ॥ ೩೩ ॥

ಇನಿತರೊಳಗೊಂದೊಂದು ತತ್ವದ ।
ಘನವ ಬಲ್ಲವರಾರು ಒಂದರೊ ।
ಳಿನಿತು ತತ್ವಗಳಡಗಿ ತಮ್ಮೊಳು ತಾವೆ ಬೆರಸಿಹವು ॥
ತನುಜ ವಿಶ್ವೋತ್ಪತ್ತಿ ಕಾರಣ ।
ಕಿನಿತಿವಕ್ಕಾಧಾರವಾದುದು ।
ಘನ ಸದಾಶಿವತತ್ವ ಲಿಂಗಜ್ಯೋತಿ ಕೇಳೆಂದ ॥ ೩೪ ॥

ಶ್ರೀ ಸದಾನಂದೈಕರ ಸಪೀ ।
ಯೂಷ ವಾರ್ಧಿಯ ಮಡುಗಳೊಳು ಗಂ ।
ಗಾಸತೀ ಧರೆಯೊಳಗೆ ರಂಜಿಪ ತೀರ್ಥಕೋಟಿಗಳು ॥
ಕಾಶಿಯೊಳಗಣ ವಿಮಲ ತೇಜೋ ।
ರಾಶಿಮಯ ಲಿಂಗಗಳೊ ಯೆಂಬಂ
ತಾ ಸದಾಶಿವ ತೇಜದೊಳು ತತ್ವಂಗಳಿಹವೆಂದ ॥ ೩೫ ॥

ತೋರದಿಪ್ಪ ಜ್ಯೋತಿ ಶಿವನನು ।
ತೋರಿಕೆಯ ಸುಜ್ಯೋತಿಯೆನಿಸುತ ।
ತೋರಿದ ಜ್ಯೋತಿಯನು ನಾನಾ ತತ್ವ ಮೂರ್ತಿಗಳಾಽಽ॥
ಕಾರದಲಿ ಮಹದಾದಿ ಜಗದಾ ।
ಕಾರದಲಿ ಸುಳಿಸುತ್ತ ಮಾಯಾ ।
ನಾರಿ ತೋರುವಳಿಂದ್ರಜಾಲದ ಸಿರಿಯ ಸಡಗರವ ॥ ೩೬ ॥

ಓಮೆನಿಪ ಶಬ್ದಾರ್ಥವೇ ಶಿರ ।
ಹಾಮೆನಿಪ ಶಬ್ದಾರ್ಥ ಹೃದಯಂ ।
ಹ್ರೀಮೆನಿಪ ಶಬ್ದಾರ್ಥಮಂಘ್ರಿಗಳಖಿಳ ತತ್ವಗಳ ॥
ಸ್ತೋಮಮಂಗೋಪಾಂಗಗಳು ನಿ ।
ಸ್ಸೀಮ ಪಂಚಾಕ್ಷರಗಳರ್ಥಗ ।
ಳಾ ಮಹಾತ್ಮನ ಪಂಚವಿಂಶತಿ ತತ್ವಕುಲವೆಂದ ॥ ೩೭ ॥

ತನ್ನ ನಿಜವೆನಿಸಿಪ್ಪ ಘನ ಸಂ ।
ಪೂರ್ಣ ತೇಜವನರುಹಿ ಭಜಕರ ।
ತನ್ನೊಳಡಗಿಪ ಕರುಣದಿಂ ಹೊಳೆದುದ್ಧರಿಸಿ ಕೊಡೆ ॥
ತನ್ನೊಳಗೆ ತಾನಡಗಿ ಥಳಥಳಿ ।
ಪುನ್ನತದ ಪಂಚಾಕ್ಷರಾತ್ಮನ ।
ಪೂರ್ಣ ತೇಜದೊಳಾಡುತಿಹೆ ನಾನೆಂದನಾ ದಿನಪ ॥ ೩೮ ॥

ವೇದಮತದಿಂ ಪುಣ್ಯ ಪಾಪವ |
ವೇದಮತದಿಂ ಸ್ವರ್ಗ ನರಕವ |
ವೇದಶಾಸ್ತ್ರ ಪುರಾಣ ಮತದಿಂ ಕರ್ಮ ಯುಕ್ತಿಗಳ ||
ವೇದ ಮಸ್ತಕ ಮುಖದಿ ಸುಜ್ಞಾ |
ನೋದಯವನರಿದಾದಿ ಮುಕ್ತಿಯ |
ಸಾಧಿಸುವ ದಾರಿಗಳನಿಕ್ಕಿದರೀಜಗತ್ರಯಕೆ ||೩೯||

ಆದಡೊಂದು ರಹಸ್ಯವಿದಕಾ |
ವೇದಶಾಸ್ತ್ರ ಪುರಾಣವುಸರಿದ |
ಹಾದಿಯೆಲ್ಲವು ಸತ್ಯವೆಂದೇ ಧರ್ಮ ಕರ್ಮಗಳ ||
ಆದರಿಸಿ ನಡೆಸುತ್ತ ಪಾಪದ |
ಹಾದಿಯನು ನೆರೆಬಿಟ್ಟು ಮುಕ್ತಿಯ |
ನೈದಬೇಕಲ್ಲದೆ ವೃಥಾ ಹುಸಿಯೆಂಬುದೇಕೆಂದ ||೪೦||

ಕರ್ಮವನು ಬೇಕೆಂದು ಬಿಟ್ಟಡೆ |
ಬ್ರಹ್ಮಹತ್ಯಾದೋಷ ಕರಣವು |
ನಿರ್ಮಲತ್ವವನೈದೆ ಪೂರ್ಣಜ್ಯೋತಿಯೊಳು ಬೆರಸಿ ||
ಹಮ್ಮು ದೇಹದೊಳಿಲ್ಲ ತಾವೇ |
ಕರ್ಮಗಳು ತೊಲಗುವುವು ಬರಿದೆಯೆ |
ಬ್ರಹ್ಮಬೋಧೆಯ ಕೇಳ್ವೆವೆಂದೊಡೆ ಕರ್ಮಬಿಡದೆಂದ ||೪೧||

ಬ್ರಹ್ಮವೇ ಶಿವತತ್ವವರಿವಡೆ |
ವಾಙ್ಮನಕಗೋಚರವು ಮತ್ತದ |
ನೊಮ್ಮೆಯಿಂ ತೋರ್ಪುದೆ ಸದಾಶಿವತತ್ವವದು ಸುಲಭ ||
ಬ್ರಹ್ಮವಿದನೀ ಕೇಳಿದರ್ಥವಿ |
ದೊಮ್ಮೆ ನಿರ್ಣಯವಾಯ್ತು ಪರಶಿವ |
ನೆಮ್ಮ ಹೃದಯದೊಳರುಹಿದಂತಿರೆ ಕಂದ ಕೇಳೆಂದ ||೪೨||

ಶುದ್ಧ ಪರಮ ಬ್ರಹ್ಮ ತತ್ವ ಸ |
ವೃದ್ಧಿಯನು ಸುಖಸಾಂದ್ರ ಪೀಯೂ |
ಷಾಬ್ಧಿಯನು ಭಕ್ತಿಯಲಿ ಕೇಳಾನಂದಿಸುವೆನೆಂಬ ||
ಬೋಧ್ಯರಿಗೆ ಚಿದಖಂಡ ಲಕ್ಷಣ |
ಸಾಧ್ಯರಿಗೆ ಪರಮಾನುಭವ ಸುಖಸಂ |
ಸಿದ್ಧರಿಗೆ ವಂದಿಸುವೆನೆಂದನು ಭಾನು ಸುತನೊಡನೆ ||೪೩||

# ಕನ್ನಡ ಆದಿತ್ಯಪುರಾಣ

## (ಐದನೆಯ ಸಂಧಿ)

ಸೂಚನೆ॥ ಪರಮಪೂರ್ಣಜ್ಯೋತಿಯೊಳ (ಗು)।
ಚ್ಚರಿಪ ಜಗದುತ್ಪತ್ತಿಯನು ವಿ।
ಸ್ತರಿಸಿದನು ಮಾರ್ತಾಂಡನುದ್ದೇಶದಲಿ ಮನುವರಗೆ ॥

ಭಾ॥ಷ॥ ಆಮಹಾ ಪೂರ್ಣಪ್ರಕಾಶ ದೊ ।
ಳೀ ಮಹಾ ತತ್ವಾತಿಭೂತ ।
ಸ್ತೋಮವೀಶ್ವರರುದ್ರವಿಷ್ಣು ವಿಧಾತ್ರರುದ್ಭವವ ॥
ಪ್ರೇಮದಿಂದೊರೆದೆಮ್ಮ ಸಲಹೆಂ ।
ದಾ ಮನುವಿಗರುಹಿದನು ವೇದಶಿ ।
ರೋ ಮಹಾರ್ಥವಸಂಖ್ಯ ಸಮ್ಮತವಿಡಿದು ಗಗನಮಣಿ ॥ ೧ ॥

ಹಲಕೆಲವು ಕಲ್ಪಾಂತಕಿಚ್ಛಾ ।
ಲಲನೆಯೊಡಗೂಟದಗಲಿ ಲಿಂಗವೆ ।
ಹೊಳೆದುದೀಶ್ವರನಾಗಿಯೆಂಬಂದದಲಿ ತೋರಿದುದು ॥
ತಳಿತ ಬಿರುಬೇಸಗೆಯ ಬಿಸಿಲೇ ।
ಜಲವೆನಿಸಿ ತೋರ್ಪಂತೆ ಗಾಳಿಯೆ ।
ಸುಳಿದು ಸುಂಟರುಗಾಳಿಯೊಲು ಸುಳಿದಾಡಿತೆಂಬಂತೆ ॥ ೨ ॥

ಹೊಳೆದುದಾ ಶಿವಲಿಂಗದೊಳಗು ।
ಜ್ವಲಿಪ ತೇಜೋಮೂರ್ತಿ ವರ ಮೂಂ ।
ಗಲಿಕನೇಕಮುಖಂ ತ್ರಿನೇತ್ರ ದ್ವಿಭುಜಲೀಲೆಗಳು ॥
ಲಲನೆಯುಮೆಯರ್ಧಾಂಗ ಸುಶ್ಯಾ ।
ಮಲಿತ ವರ್ಣದಿ ಯೆಸೆದುಮಿಗೆ ಕಂ ।
ಗೊಳಿಸಿದನು ಮೆರೆವರ್ಧನಾರೀಶ್ವರನು ಲಿಂಗದಲಿ ॥ ೩ ॥

ಆ ಸದಾಶಿವ ತತ್ವದರ್ಧ ಸ।
ತೀ ಸದಾಕೃತಿಯಾಗಿ ಬಹಳ ವಿ ।
ಲಾಸದಿಂ ಕ್ರೀಡಿಸುತಲಿರ್ದುದನಂತ ಕಲ್ಪದಲಿ ॥
ಈಶನುದರದಿ ರುದ್ರನಾಗೌ ।
ರೀಸಹಿತ ಹರಿವಾಮದಲಿ ಲ ।
ಕ್ಷ್ಮೀಸಹಿತ ಲಜವಾಕ್ಸಹಿತ ಬಲದಲ್ಲಿ ಜನಿಸಿದರು ॥ ೪ ॥

ಮೂರೆರಡನೊಂದೆನಿಪ ಶಕ್ತಿಯು ।
ಮೂರೆರಡನೊಂದೆನಿಪ ಗುಣಗಳ ।
ಮೂರೆರಡನೊಂದೆನಿಪ ಕರ್ಮಗಳೊಳಿಗವನೀಶ ॥
ಮೂರು ಮೂರ್ತಿಗಳಿಂಗೆ ಕೊಟ್ಟನು ।
ಮೂರು ಗುಣಗಳಿಗವರು ಕೊಟ್ಟಾ ।
ಮೂರು ಗುಣಕಾಧಾರವಾಗಿಪರವರು ಸಾಕ್ಷಿಗರು ॥ ೫ ॥

ಆದಿಬೊಮ್ಮಕೆ ಹಿರಿಯನಾ ಹರಿ ।
ಯಾದಿವಿಷ್ಣುಗೆ ರುದ್ರ ಹಿರಿಯನು ।
ಮಾದಿರುದ್ರಂಗೀಶನೀಶಂಗಾ ಸದಾಶಿವನು ॥
ಭೇದಿಸಲು ಹಿರಿಯನು ಸದಾಶಿವ ।
ಗಾದುದಾ ಶಿವತತ್ವಕೆಲ್ಲವ ।
ಕಾದಿಯದು ಪರವಸ್ತುವದರಿಂದಧಿಕವಿಲ್ಲೆಂದ ॥ ೬ ॥

ಕೊಟ್ಟನಾ ಬ್ರಹ್ಮಂಗೆ ರುದ್ರನು ।
ನಿಟ್ಟುಸಿರು ಮುಖದಿಂದ ಹೊಗಳುತ ।
ಹುಟ್ಟಿದಾಶತಕೋಟಿ ವೇದವನವರ ಪದವಿಡಿದು ॥
ಸೃಷ್ಟಿಸುವೆನೆಂಬಾಯಹಂಕೃತಿ ।
ಪುಟ್ಟುವಾ ಸಂದಿನೊಳು ಮಹದು ।
ತೃಷ್ಟ ತತ್ವವೆ ಹುಟ್ಟಿದವು ನಾನಾದಿಗಳು ಸಹಿತ ॥ ೭ ॥

ಆಮಹಾ ತತ್ವದಿನಹಂಕೃತಿ ।
ಸೀಮೆ ದೋರಿತು ಪಂಚಕಳೆಯಿಂ ।
ತಾಮಸಾದಿ ಗುಣಂಗಳಿಂ ತನ್ಮಾತ್ರೆಗಳು ಸಹಿತ ॥
ವ್ಯೋಮ ಪವಮಾನಾಗ್ನಿ ಪುಷ್ಕರ ।
ಭೂಮಿಗಳು ಬರಬರಲು ಕಿರಿಕಿರಿ ।
ದಾ ಮಹಾಜಡಗಳಿಗೆ ಜಡವೆನಿಸಿದವು ಕ್ರಮದಿಂದ ॥ ೮ ॥

ಆದಿರುದ್ರಗೆ ಮೂರು ಗುಣವುಂ ।
ಟಾದಿವಸ್ತುವಿಗೆರಡು ಬೊಮ್ಮಂ ।
ಗಾದುದೊಂದಾ ರುದ್ರಹೃದಯದೊಳಿರ್ದ ರಾಜಸವೆ ।
ಅದುದೀ ಬ್ರಹ್ಮಾಂಡಮಂಡಲ ।
ವಾದಡದುವೇ ಹೇಮನಾಭನ ।
ನಾದಿ ಬೊಮ್ಮಂಗಿತ್ತು ನುಡಿದನು ರುದ್ರನಜನೊಡನೆ ॥ ೯ ॥

ಮಾಡುಸೃಷ್ಟಿಯನದರೊಳಗೆ ನೀ ।
ಮಾಡಿದೀ ಸೃಷ್ಟಿಯೊಳು ವಿಪ್ರರು ।
ಮಾಡಿದಪರೆನ್ನನು ಮುಖೋದ್ಭವರಂಶಸಂಭವರು ॥
ಖೋಡಿಯಿಲ್ಲದೆಯವರ ವಚನಕೆ ।
ಮಾಡುವೆನು ತದ್ಧಿತವ ಭಂಗವ ।
ಮಾಡಿ ನೋಯಿಸಿದರಿಗವಸ್ಥೆಯ ಮಾಳ್ಪೆ ನಾನೆಂದ ॥ ೧೦ ॥

ಈಶ ತನ್ನಯ ವಾಮದಲಿ ಲ ।
ಕ್ಷ್ಮೀಶನನು ಪಡೆದಾಹರಿಯ ಸುವಿ ।
ಲಾಸವನು ಕಂಡೀಮನೋಹರ ಮೂರ್ತಿ ಭಾವಿಸಲು ॥
ಶ್ರೀಶಿವನವೊಲು ಬಹಳ ತೇಜೋ ।
ರಾಶಿಪರಿಪೂರ್ಣ ಪ್ರಭಾ ವಿ ।
ನ್ಯಾಸದಿಂದಲಿ ರಾಮನೆಂಬೀ ಹೆಸರು ನಿನಗೆಂದ ॥ ೧೧ ॥

ಮುಂದೆ ನೀಕಾಶಿಯೊಳು ತಪದಲಿ ।
ನಿಂದು ಪುಷ್ಕರಣಿಯನು ಮಾಡಲು ।
ಬಂದು ನಿನ್ನಯ ತಪಕೆ ವರವನು ರುದ್ರನೀವಾಗ ॥
ಕುಂದದೀಮಂತ್ರವನು (ತಾ) ನಿ ।
ನ್ನಿಂದ ಪಡೆದವನಾಗಿ ಕೊಡುವಾ ।
ನಂದಮೂರ್ತಿಯನೆನುತ ಕಳುಹಿದನೀಶನಾಹರಿಯ ॥ ೧೨ ॥

ಆದಿರುದ್ರಂಗೆಂದನೀಶ್ವರ ।
ನೈದನಿನ್ನಾಜ್ಞೆಯಲಿ ವಿಧಿ ಯಾ ।
ಶಾದಿಗಳು ವರ್ತಿಸಲಿಯವರಿಂದಾಗದರ್ಥವನು ॥
ಭೇದವಿಲ್ಲದೆ ಮಾಡು ವಿಧಿಗೆ ವಿ ।
ನೋದಮಾತ್ರದಿ ನಿಖಿಲ ಜಗವನು ।
ಮೋದೆನುತ್ತ ಮಹೇಶನಡಗಿದನಾತ್ಮಲಿಂಗದಲಿ ॥ ೧೩ ॥

ಹರಿಪಿತಾಮಹರೊಳಗೆ ವಿಭುವಾ ।
ಹರಿ ಹರಿಯನಜನೊಮ್ಮೆ ಮರೆದಾ ।
ಹರಿಯೊಡನೆ ಸೆಣಸುವನು ತಿದ್ದುವನವರನಾ ರುದ್ರ ॥
ಹರನೊಡನೆ ಗರ್ವಿಸಲು ಪಂಚಮ ।
ಶಿರವನರಿವನು ಭೈರವಾಂಗವ ।
ಧರಿಸಿರುದ್ರನಿದಿಂತು ಕುಣಿಸುವನೀಶ್ವರನ ಮಾಯೆ ॥ ೧೪ ॥

ಈಶನಗ್ಗದ ಭಕ್ತಿಯೇಯುಮೆ |
ಪಾಶದಲಿ ಕಟ್ಟಿವಳು ಮತ್ತಾ |
ಪಾಶವನು ಶಿವನಾಜ್ಞೆಯಿಂದಲಿ ಬಿಡಿಸುವಳು ತಾನೆ ||
ಆ ಶಿವನ ಮೂರ್ತಿಗಳು ಹರಿಕಮು |
ಲಾಸನಾದಿಗಳಾಗಿಯೂ ಮ|
ತ್ತಾ ಶಿವನ ಮರೆವರು ಕಣಾ ಮಾಯೆಯಲಿ ಕೇಳೆಂದ || ೧೪ ||

ನಿಮ್ಮ ಬಿಟ್ಟರೆ ನರಕವಾಗಲಿ |
ನಿಮ್ಮ ಮುಖದಿಂದೆಮ್ಮನರ್ಚಿಸಿ |
ನಮ್ಮೊಳೈಕ್ಯವೆಯಾಗಲುಳಿದಾಗಮುಗಳವನಿಯಲಿ ||
ನಿಮ್ಮ ಸರಿಯಾಗದೆಯಿರಲಿ ನೀ |
ವೆಮ್ಮನರಿದಿರಿ ನಿಮ್ಮನರಿವವ |
ರೆಮ್ಮನರಿವರೆನುತ್ತ ಕೊಟ್ಟನು ಶ್ರುತಿಗಳಿಗೆ ವರವ || ೧೫ ||

ಕಟ್ಟತಲೆಯಲಿ ದೊಡ್ಡ ಸುಣ್ಣದ |
ಮೊಟ್ಟೆಯನು ನೀವ್ರೊಕ್ಕ ಮನುಜರ |
ಸುಟ್ಟು ಬಿಡುವೊಲು (ತಾವು ನೆರೆ) ನಡೆವುತ್ತ ಧರ್ಮವನು ||
ಬೆಟ್ಟದಲಿ ತನು ಮೂಡೆ (ಬರಿದೇ) |
ಸುಟ್ಟು ಬಿಡುವುದನರಿಯದಕಟಾ |
ದುಷ್ಟರಿದನರಿದರಿದು ಪಾಪವ ಮಾಳ್ಪರವನಿಯಲಿ || ೧೬ ||

ತರುಣಿ ಧನ ಧರೆ ಮಾಯೆ ಪಾಶದ |
ಹುರಿಗಳಿವು ನೆರೆ ಮೂರುಬಲೆಯಲಿ |
ಹೊರಳುವರಿಗಿದು ನೋಡಬಾರದು ತಿಳಿದ ಮಾನವರು ||
ಪರರು ಮಾಡುವ ಕಷ್ಟವನು ಸಲೆ |
ಮರೆದು ಸರ್ವಪ್ರಾಣಿದಯೆಯಲಿ |
ಹರನ ಭಜಿಸುವರಿಷ್ಟಸಿದ್ಧಿಯ ಪಡೆವರವರೆಂದ || ೧೭ ||

ಉರಿದವಾ ವಿಧಿವಿಷ್ಣು ಪುರಿಗಳು |
ಸುರಪುರಕ್ಕಾಸುರರ ಮಾಯೆಯ |
ಧರೆಯ ಸಿರಿಯದು ಕಂಡ ಕೆಲಸಗಳಜನ ದಿನದೊಳಗೆ ||
ಎರಡೆರಡು ಗಳಿಗೆಗೆ ಜಗತ್ರಯ |
ವುರಿದು ನೀರೊಳು ಮುಳುಗುವುದು ಜೀ |
ವರಿಗೆ ಭೋಗವದೆಲ್ಲಿ ಸುಖವೆಲ್ಲಿಯದು ಪದವಿಯಲಿ || ೧೮ ||

ಒಡಲ ಧರಿಸಿದ ಮೇಲೆ ಕರ್ಮವ ।
ನಡೆಸಬೇಕದು ತಪ್ಪಿದಾಗಲೆ ।
ಕೆಡಹುವರು ನರಕದಲಿ ಸುತ್ತಿಸುವರು ಭವಂಗಳಲಿ ॥
ಒಡಲ ಹಮ್ಮಿದು ಹಲವು ಪರಿಯಲಿ ।
ಕೆಡಹುದಲ್ಲದೆ ಬಿಡದು ದೇಹದ ।
ತೊಡಕ ಹೊದ್ದದೆ ಮುಕ್ತಿಸುಖವಂ ಪಡೆಯಬೇಕೆಂದ ॥ ೨೦ ॥

ಎಂದು ಸೃಷ್ಟಿಕ್ರಮುವನದರೊಳು ।
(ಹೊಂದಿ) ಹೊರವಾ (ಧರ್ಮ) ಕರ್ಮದ ।
ದಂದುಗವನದನಳಿವ ಶಿವತತ್ವಾಮೃತಾನಂದ ॥
ಸಾಂದ್ರವನು ತಿಳುಹಿದರೆ ಮನುಮುನಿ ।
ವೃಂದ ವೊಡಲನು ಮರೆದು ಶಿವನೊಳು ।
ನಿಂದವೊಲು ಸೊಗಸಿರ್ದರೆಂದನು ಸೂತಮುನಿಗಳಿಗೆ ॥ ೨೧ ॥

ಐದನೆಯ ಸಂಧಿಯು ಮುಗಿದುದು.



(ಆರನೆಯ ಸಂಧಿ)

ಸೂಚನೆ॥ ಹರಹರಾ ಯೆಂದೆಂಬ ನಾಮು ।
ಸ್ಮರಣೆಯಿಂ ಸುದ್ಯುಮ್ನ ಭೂಪತಿ ।
ಪರಮ ಮುಕ್ತಿಗೆ ಸಂದ ಕಥೆಯನು ಪೇಳ್ದನಬ್ಜಸಖ ॥

ಕೇಳಲಿಂತಾಯನುಭವಾಬ್ಧಿಯೊ ।
ಳಾಳಿದರಿಗಿನ್ನೆಂತೊ ಕರುಣದಿ ।
ಹೇಳಬೇಕೀ ಜ್ಞಾನಮೋಹಗಳೇತರಿಂದಹುದು ॥
ಶೂಲಿಯೊಲಿವನದೇತರಿಂದಲಿ ।
ಮೇಲೆ ಮುಕ್ತಿಯ ಪಡೆದರಾರಿದ ।
ಹೇಳಬೇಕೆಂದೆರಗೆ ನುಡಿದನು ಕಮಲಸಖನಂದು ॥ ೧ ॥

ಸುಮ್ಮನಹುದೇ ಜ್ಞಾನ ದೇಹದ ।
ಹಮ್ಮನುಳಿಯದೆ ಹಮ್ಮು ತಾನೇ ।
ಸುಮ್ಮನಳಿಯದು ಕೇಳ್ ಚತುಸ್ಸಾಧನಗಳಿಲ್ಲದಿರೆ ॥
ನಿರ್ಮಲಿನ ಸಾಧನವು ಗುರುವಿನ ।
ನಲ್ಮೆಯಿಲ್ಲದೆ ಸಿದ್ಧಿಸದು ಕೇಳ್ ।
ಮರ್ಮವಿದು ಗುರುಕರುಣೆಯುಳ್ಳೊಡಸಾಧ್ಯವೇನೆಂದ ॥ ೨ ॥

ತಿಳಿದು ನಿತ್ಯಾನಿತ್ಯ ಭೇದವ ।
ನುಳಿದು ಇಹಪರ ಭೋಗದಾಸೆಯ ।
ತಳೆದು ಶಮೆ ದಮೆ ಶಾಂತಿ ದಾಂತಿ ತಿತಿಕ್ಷೆಯುಪರತಿಯ ॥
ಲಲಿತನೋಕ್ಷಾಪೇಕ್ಷೆಯೊಳು ಮತಿ ॥
ನೆಲಸಿ ನಾಲುಕು ಸಾಧನವನಿಂ ।
ತಳವಡಿಸಬೇಕಮಲ ಸುಜ್ಞಾನವನು ಪಡೆವವನು ॥ ೩ ॥

ಜ್ಞಾನಕಿನ್ನೆರಡುಂಟು ಕಾಶೀ ।
ಸ್ಥಾನದೇಹತ್ಯಾಗ ಲಿಂಗದ ।
ನೂನ ಭಕ್ತಿಜ್ಞಾನ ದೊರಕದು ಭವಭವಂಗಳಲಿ ॥
ತಾನೆ ಸಾಧಿಸಬೇಕು ಭಕ್ತಿ ಶಿ ।
ವಾನು ಕೀರ್ತನದಿಂದ ಸುಜ್ಞಾ ।
ನಾನುಭವ ಸುಖಸಿದ್ಧಿಯಹುದಾ ಕಥೆಯ ಕೇಳೆಂದ ॥ ೪ ॥

ಪದ್ಮಕಲ್ಪದೊಳಾದಿ ಕೃತಯುಗ ।
ಮಧ್ಯದಲಿ ಸುದ್ಯುಮ್ನನೆಂಬನಿ ।
ಳೋದ್ಧರಣ ನರಸಾದನಿಂದ್ರದ್ಯುಮ್ನ ನೃಪಸೂನು ॥
ಶುದ್ಧಧರ್ಮಖ್ಯಾತಿ ಶಿವಪದ ।
ಪದ್ಮಭಕ್ತಿಸುಖಾಬ್ಧಿಯೊಳು ಮುಳು ।
ಗಿರ್ದ ಮತಿಯೊಳಗೆಸೆದ ನೃಪ ನಿಷ್ಠಾನಪುರದೊಳಗೆ ॥ ೫ ॥

ಒಂದು ದಿನ ತೃಣಬಿಂದು ಮುನಿಪತಿ ।
ಬಂದನರಮನೆಗಾ ಸಮಯದಲಿ ।
ಸಾಂದ್ರಪರಮಾನಂದ ತೇಜೋಲಿಂಗ ಪೂಜೆಯಲಿ ॥
ನಿಂದ ನಿರ್ಮಲ ಬುದ್ಧಿಯನು ಮನ ।
ದಿಂದಲರಿದಾ ನೃಪತಿಗರುಹದೆ ।
ಬಂದುದನು ಕೆಲಸಾರಿ ನೋಡುತ್ತಿರ್ದನರ್ಚನವ ॥ ೬ ॥

ಆಗ ಶಿವಪೂಜಾಸಮಾಪ್ತಿ ಸ ।
ಮಾಗಮದೊಳಾ ಲಿಂಗದೊಳು ಶಿವ ।
ಯೋಗಿ ಬಿಂಬಿಸೆ ಶಂಭುವೇ ಪ್ರತ್ಯಕ್ಷವಾದನಲಾ ॥
ಶ್ರೀ ಗುರುವೆ ಜಯ ಜಯ ನರಾಮರ ।
ಯೋಗಿವಂದ್ಯನೆ ಜಯವೆನುತ ತಲೆ ।
ವಾಗಿ ವಂದಿಸುತಿರಲು ಮುನಿ ಕಂಡಪ್ಪಿದನು ನೃಪನ ॥ ೭ ॥

ಮೂರ್ತಿಲಿಂಗಗಳಾಗಿ ಶಿವನ ಸು ।
ಕೀರ್ತಿಸುವ ಅರ್ಚಕರಿಗೋಸುಗ ।
ಮೂರ್ತಿ ಗಂಗಾ...........ಸಗುಣವದು॥
ಸ್ಫೂರ್ತಿ ಲಿಂಗಕ್ಕವಯವತಿಗಳ ।
ವರ್ತನೆಗಳಿಲ್ಲವದು ನಿರ್ಗುಣ ॥
ಮೂರ್ತಿಪೂಜೆಯಿನಧಿಕ ಲಿಂಗಾರ್ಚನೆಗಳೇ ಎಂದ ॥ ೮ ॥

ಮುನ್ನವೇ ಶಾಸ್ತ್ರಾನ ಮೂರ್ತಿಯ ।
ನನ್ಯವೆನೆ ಪೂಜಿಸುವನರ್ಚನ ।
ಪೂರ್ಣ ಶಿವಲಿಂಗವೆನೆ ಪೂಜಿಪನದರ ಬಲುಹಿಂದ ॥
ಸನ್ನುತನು ನಿಟಲಾಕ್ಷ ನೂತನ ।
ಪೂರ್ಣರುದ್ರನೆನಿಪ್ಪ ಗುರುಸುತ ।
ನಂ ನಿವಾರಿಸಿ ಗೆದ್ದನವನೀಪಾಲ ಕೇಳೆಂದ ॥ ೯ ॥

ಮತಿಯ ತಾಮಸದಿಂದ ಭಜಿಸಲು ।
ಕೃತಕರಾ ರಾಕ್ಷಸರ ಭೋಗೋ ।
ನ್ನತಿಯ ಪಡೆದೈದುವರು ನಾನಾಭವಭವಂಗಳನು ॥
ಕ್ಷಿತಿಯೊಳಗೆ ಮತ್ತಾ ರಜೋಗುಣ ।
ಮತಿಗಳಿಂದ್ರಾದ್ಯಮರ ಭೋಗಾ ।
ಚ್ಯ್ಯುತರು ದುಃಖವನುಂಡು ಪಡೆದರು ಸಾತ್ವಿಕದ ಮತಿಯ ॥ ೧೦ ॥

ಪರಮ ಸಾತ್ವಿಕ ಭಕ್ತಿಯುಳ್ಳಾ ।
ಪುರುಷರಲ್ಲಿ ಸನತ್ಕುಮಾರಸು ।
ಭರತ (ಶುಕ) ನಾರದ ಸನಂದನರಿಂತಸಂಖ್ಯಾತ ॥
ನಿರುತ ಜೀವನ್ಮುಕ್ತರಾ ತನು ।
ವೆರಸಿ ದುಃಖದ ಕುರುಹನರಿಯದೆ ।
ಬೆರಸುವರು ಲಿಂಗೈಕ್ಯ ಸುಖಸಾಗರದ ತಿರುಳಂತೆ ॥ ೧೧ ॥

ಚಿತ್ತವಿಸು ಮುನಿನಾಥ ಎನ್ನಯ ।
ವೃತ್ತವನು ಗೋಮತಿಯ ತಟದಲಿ ।
ವರ್ತಿಪೆನು ಸುವ್ಯಾಘನೆಂಬ ಕಿರಾತಪತಿಯೆನಿಸಿ ॥
ಧಾತ್ರಿಸುರ ಹೊರಗಾಗಿ ಪಶುಧನ ।
ವಸ್ತುವಿವು ಮೊದಲಾಗಿ ತಸ್ಕರ ।
ವೃತ್ತಿಯೆನ್ನದು ವಿಷಯಭೋಗಕೆ ಪೂರ್ವಜನ್ಮದಲಿ ॥ ೧೨ ॥

ಮರುಳು ಹಿಡಿದವರೇನನಾದರೆ ।
ಹರಟೆಗುಟ್ಟುವ ತೆರದಿನಂದಾ ।
ಹರಹ(ರ)ಪ್ರಹರೆಂದು ನಿಮಿಷಂ ಬಿಡದೆ ಬರುತಿರಲು ॥
ಮರುಳು ಹಿಡಿದುದು ಮದ್ದು ಮರುವಡಿ ।
ದೊರೆಕಿತೋ ಯೆನುತೆಲ್ಲ ಬಿಡದ ।
ಬ್ಬರಿಸಿ ಕರಿಗುಂದಿದಡೆ ಬಿಡದಾ ನಾಮ ನಾಲಗೆಯ ॥ ೧೩ ॥

ಮನದೊಳಗೆ ಶಿವನಾಮವೆಂಬುದ ।
ನಿಸಿತನರಿಯದೆ ಜೀವಿಸಿದೆ ತ ।
ನ್ನನುದಿನಂ ಬಹುಕಾಲವನಿತರ ಮೇಲೆ ಮುಪ್ಪಿನಲಿ ॥
ತನುವಳಿಯಲಂತಕನವರ ಮುಂ ।
ಬಿನಲಿ ದೂತರು ಹಾಯ್ಕಲೀಕ್ಷಿಸ ।
ಲಿನತನುಜನಾ ಚಿತ್ರಗುಪ್ತರ ಕೇಳ್ವೊಡಿಂತೆಂದರ್ ॥ ೧೪ ॥

ಈತನಾ ಹರನಾಮದಿಂ ನಿ ।
ರ್ಧೂತಪಾತಕನನುದಿನದೊಳಾ ।
ಭೂತನಾಥನ ನಾಮವಿಹುದಸು ಹೊದ್ದದಂದದಲಿ ॥
ಪೂತನಿವ ಪುಣ್ಯಾತ್ಮನೆನೆ ರವಿ ।
ಜಾತನರ್ಚಿಸಿ ಯೆನ್ನನೊಲವಿಂ ।
ದಾತನಮರಾವತಿಗೆ ಪುಷ್ಪಕದಿಂದ ಕಳುಹಿದನು ॥ ೧೫ ॥

ಹತ್ತುಸಾವಿರ ವರುಷವಲ್ಲಿ ಸ ।
ಮಸ್ತಭೋಗವನುಂಡು ಬಳಿಕ ವಿ ।
ಧಾತೃಲೋಕವ ಹೊಗಿಸಿ ಭೋಗವನುಂಡು ಕಲ್ಪದಲಿ ॥
ಮತ್ತೆ ಭೋಗಿಸಿ ಬಂದೆನಿಲ್ಲಿಗೆ ।
ಧಾತ್ರಿಯೊಡೆತನವಂಬಿಕೇಶನ ।
ಭಕ್ತಿ ನಾಮಸ್ಮರಣೆಯಾಯಿತು ನಾಮಬಲದಿಂದ ॥ ೧೬ ॥

ಅರಿದೆವೈ ಪೂರ್ವದಲಿ ವಿಪ್ರರ ।
ತರಳನಾಗಿರ್ದಂದು ನಿನ್ನಯ ।
ಗುರುವಿನಾಜ್ಞೆಯ ಮೀರದಿರ್ದವನಾಗಿಯೊಂದು ದಿನ ॥
ಗುರುವಿನುಕ್ತಿಯ ಮೀರಿದುದರಿಂ ।
ದುರೆ ಕಿರಾತನುಮಾದೆ ನಿಚ್ಚಲು ।
ಗುರುಭಕುತಿ ಮೀರದಿರೆ ಬಂದುದು ಬಾಯ್ಗೆ ಹರನಾಮ ॥ ೧೭ ॥



ಗುರುಹರಾಂಘ್ರಿಯ ಸೇವೆಗೋಸುಗ।
ಕರಣನಿಕರ ಪ್ರಾಣಧನಗಳು ।
ಧರಣಿಯೊಡೆತನವರ್ಪಿತವನ್ಯೆದಲಿ ತವಾಜ್ಞೆಯಲಿ ॥
ವರವಿದೆನಲು ತಥಾಸ್ತುವೆಂದೇ ।
ಪರಸಿ ಹೊಗಳುತ ನಾಮುವನು ಮುನಿ ।
ಸರಿದನಿದ ಕೇಳ್ವರಿಗೆ ಬ್ರಹ್ಮನ ಲೋಕವಹುದೆಂದ ॥ ೧೮ ॥

ಜನಕನಿಂದ್ರದ್ಯುಮ್ನನಬುಜಾ ।
ಕ್ಷನ ಚರಣ ಭಕ್ತಿಯಲಿ ಹಸ್ತಿಯು ।
ಜನನ ಶಾಪವನೀಗಿ ವೈಕುಂಠದಲಿ ಸುಖಿಸಿರ್ದು ॥
ತನುಜ ಮುಕ್ತಿಯನ್ಯೆದಲಿತ್ತಲು ।
ಘನತರದ ವೈಕುಂಠದಿಂ ನೆಗೆ ।
ದನುಪಮಿತ ಶಿವಲೋಕಗಾಣಾಪತ್ಯವನು ಪಡೆದ ॥ ೧೯ ॥

(ನ)ರ್ಮದಾ ತಟದಲಿ ನಿಜಾಶ್ರಮ ।
ಧರ್ಮದಲಿ ಲಿಂಗಪ್ರತಿಷ್ಠಾ ।
ಕರ್ಮದಲಿ ತೃಣಬಿಂದು ಪೂಜಿಸುತಿರ್ದು ಪರಶಿವನ ॥
ಒಮ್ಮೆ ನೆನೆದನು ತೀರ್ಥಯಾತ್ರಾ ।
ಕರ್ಮವನು ಭೂಮಿ ಪ್ರದಕ್ಷಿಣ ।
ಮಂ ಮುನಿಪ ಮಾಡುತ್ತ **ಕಾಶೀಪುರಿಗೆ** ನಡೆತಂದ ॥ ೨೦ ॥

ಕಾಶಿ ತೋರಿದಡಮಲ ಪಂಚ ।
ಕ್ರೋಶಲಿಂಗ ಜ್ಯೋತಿರೂಪದಿ ।
ನೀಶ ಮುನಿಗೆ ನಿರಾವರಣಪರ್ಯಂತ ಶತಕೋಟಿ ॥
ಭಾಸುರಾರ್ಕರು ನೆರೆದವೊಲು ಜಯ ।
ಘೋಷದಿಂ ಬೊಬ್ಬಿಡಲು ಹಂಕೃತಿ ।
ನಾಶವಾಯಿತು ಬೆರಸಿದನು ಪರಿಪೂರ್ಣ ಶಿವನೊಳಗೆ ॥ ೨೧ ॥

ಲಿಂಗಪೂಜಾ ಫಲವದೆಂತೋ ।
ಲಿಂಗನಾಮ ಶ್ರವಣವೆಂತೋ ।
ಲಿಂಗದನುಸಂಧಾನವೆಂತೋ ಸರ್ವಕರ್ಮವನು ॥
ಲಿಂಗಕೆಂದೇ ಮಾಡಿ ತಾನೇ ।
ಲಿಂಗವೆಂದೇ ತಿಳಿದ ಫಲದಿಂ ।
ಲಿಂಗದೊಳು ಬೆರಸಿದನು ಲಿಂಗದ ಮಹಿಮೆಯಿಂದೆಂದ ॥ ೨೨ ॥

ಆರನೆಯ ಸಂಧಿ ಮುಗಿದುದು.



# ಕನ್ನಡ ಆದಿತ್ಯ ಪುರಾಣ

## (ಏಳನೆಯ ಸಂಧಿ)

ಸೂಚನೆ॥ ಕಲಿಯ ಧರ್ಮವ ನೊರೆದನಣುಗಗೆ।
ಜಲಜಬಂಧು ಸನತ್ಕುಮಾರಕ।
ನೊಲವಿನಿಂ ವ್ಯಾಸಗೆ ನಿರೂಪಿಸಿದಂತೆ ಕರುಣಿಸಿದ॥

ಭಾ॥ ಷ॥ ವ್ಯಾಸಮುನಿ ಕಲಿಯುಗದ ಬರುವಿನ।
ದೂಸರಿಂ ಭಯಗೊಂಡು ಮುಖದ ವಿ।
ಕಾಸವಳಿಯಲು ಗುರುವನರಸುತ ಹಿಮಗಿರಿಗೆ ಬಂದು॥
ಲೇಸೆನಿಸುವಾಶ್ರಮದ ಶಿಷ್ಯಮ।
ಹಾ ಸಮೂಹದ ನಡುವೆ ಹೊಸ ಪರ।
ಮೇಶನೆನಿಪ ಸನತ್ಕುಮಾರನ ದೂರದಲಿ ಕಂಡ ॥೧॥

ಇತ್ತಬಾರೈ ಶಿಷ್ಯಮಸ್ತಕ।
ರತ್ನ ಬಾರೈ ಕುಳ್ಳಿರೆಂದೊಲಿ।
ದುತ್ತ ನುಡಿದನಿದೇನ ಮಾಡಲು ಬಹುದು ಕಲಿಕಾಲ॥
ಹತ್ತಿರಾಯಿತು ಭೀತಿಬಿಡದೇ।
ಕುತ್ತಮರು ಕಲಿಯುಗದ ಧರ್ಮದ।
ಮೊತ್ತವನು ನಿರ್ಣೈಸಬಹುದೇ ಸತ್ಪುರುಷರೆಂದ ॥೨॥

ಎಂದು ಗುರುವರ ನುಡಿಯಲಾನದ।
ರಿಂದ ಭೀತಿಯಲೋಡಿ ಬಂದೆನು।
ತಂದೆ ಕಲಿಯುಗಕುಳ್ಳ ಧರ್ಮವ ವರ್ತಮಾನದಲಿ॥
ಇಂದು ಕೆಲವನು ಬಲ್ಲೆನರಿಯೆನು।
ಮುಂದೆ ಕೆಲವನು ಸಾಂಗವಾಗಿ ಮು।
ನೀಂದ್ರ ವಿಸ್ತರಿಸೆನಲು ಶಿವಯೋಗೀಂದ್ರನಿಂತೆಂದ ॥೩॥

ಆವ ಯುಗಧರ್ಮಕ್ಕೆ ಮೂಲವು।
ಭೂವರರು ತನ್ನೃಪರು ಧರ್ಮವ।
ನೋವಿದರೆ ಸರ್ವರು ಸುಧರ್ಮದಿ ನಡೆದು ಬದುಕುವರು॥
ಭೂವರರು ಪಾಪಿಷ್ಠರಾದರೆ।
ಜೀವರೂ ಪಾಪಿಷ್ಠರವನಿಪ।
ರಾವುದಂ ನಡೆಸಿದರೆ ನಡೆವುದು ಕೇಳ್ ಧರಿತ್ರಿಯಲಿ ॥೪॥

ಗುರುವ ಕಾಣುತ ಕುಳಿತಿರಲು ಕೆ |
ಕ್ಕರಿಸಿ ನೋಡಲು ಭೀತಿಯಿಲ್ಲದೆ |
ಸೊರಹದರ್ಥಾವನಿಯನಾಸನದಲ್ಲಿ ಕುಳ್ಳಿರಲು ||
ಗುರುಚರಣ ಪಾದುಕೆಯ ದಾಂಟಲು |
ಗುರುನೆಗಳ್ದಾ ಕೆಲಸ ನೋಡುತ |
ಸರಿದು ಹೋದವಗಿಲ್ಲ ಪ್ರಾಯಶ್ಚಿತ್ತವವನಿಯುಲಿ || ೫ ||

ಮನೆಯ ಶೋಭನ ಮುಂಜಿ ಮದುವೆಗೆ |
ತನು ಸುಖಕೆ ಭೋಗಕ್ಕೆ ಸೂಳೆಗೆ |
ಕುಣಿವ ನಾಟಕ ಹಾಸ್ಯ ಚರಿತೆಗೆ ಡೊಂಬ ದ್ರೋಹರಿಗೆ ||
ಧನವ ತೆರುವರು ದೇವ ಪಿತೃಗಳ |
ದಿನಕೆ ವೃದ್ಧರ ಸೇವೆಗತಿಥಿಗೆ |
ಘನ ದರಿದ್ರುವ ತೋರಿ ಮೊರೆಯಿಡುತಿಪರು ಖಳರೆಂದ || ೬ ||

ನಿತ್ಯನೈಮಿತ್ತಿಕವು ಪ್ರಾಯ |
ಶ್ಚಿತ್ತ ಪಂಚಕಯಜ್ಞ ಪಿತೃದಿನ |
ವುತ್ತಮದ ದೇವೋತ್ಸವಂಗಳು ನಡೆಯುವಂದಿನಲಿ ||
ವಿತ್ತವಿಲ್ಲದೆ ನೃಪರುಮಾಡುವ |
ದುಸ್ತರದ ಬಾಧೆಯಲಿ ವಿಷಯಾ |
ಸಕ್ತರಾಗಿಯೆ ಧನಿಕರಾದರು ಕೆಡುವರದರಿಂದ || ೭ ||

ಗುರುವಿನೊಳು ಗರ್ವಿಸಿದಡಿಂದ್ರನ |
ಸಿರಿಯಕೆಡಿಸುವಡಿವಗೆ ಧಾತ್ರೀ |
ಸುರರು ವೈದಿಕಪದದಿ ನಡೆವಾ ಬಲವಿದೊಂದ್ಯೆಸೆ ||
ಸುರೆಗುಡುಹಿಗಳ ಮಾಡಿಬಿಡುವೆನು |
ಧರಣಿಯುಮರರನೆಂದು ಗುರು ವಿ |
ಸ್ತರಿಸಿದನು ಕುಟಿಲದಲಿ ಕೌಳಾಗಮವನಿಳೆಯೊಳಗೆ || ೮ ||

ಇದಕೆ ಮೆಚ್ಚಿದ ದುಷ್ಟರುಗಳಾ |
ಸುದತಿ ಪುರುಷರು ಸೊಕ್ಕಿ ಸರ್ವರಿ |
ಗಿದನೆ ಬೋಧಿಸಿ ಬಲ್ಪಿನಿಂದೊಡಬಡಿಸಿ ನಡೆಸಿದರೆ ||
ಅದರಿನುತ್ತಮ ವೈದಿಕವೆ ಕೆ |
ಟ್ಟಿದು ಮಹೇಂದ್ರನ ಶಕ್ತಿ ಕುಂದಿದು |
ದದನರಿದು ರಾಕ್ಷಸರು ಬಡಿದಟ್ಟಿದರು ನಿರ್ಜರರ || ೯ ||

ಮುರಿದು ಭಂಗಂವಡೆದು ಸುರಪತಿ |
ಗುರು ಮುನಿದ ಗುಣವೆಂದು ಬಿದ್ದನು |
ಚರಣದಲಿ ಕಂಡಾ ಬೃಹಸ್ಪತಿ ಕರುಣಿಸಿದನೊಲಿದು ||
ಸುರೆಯನರ್ಚಿಸಿ ಕುಡಿದಭೂಮಿಾ |
ಸುರರಕುಲ ನಿರ್ನಾಮವಾಗಿಯೆ |
ನರಕಕ್ಕೈದಲಿ ಗತಿಯುವರಿಗಿಲ್ಲೆಂದು ಶಪಿಸಿದನು || ೧೦ ||

ಮತ್ತೆ ಪೂರ್ವದೊಳಜನ ವರವೇ |
ದೋಕ್ತ ಮಾರ್ಗದಿ ನಡೆದು ಸರ್ವರು |
ಮುಕ್ತರಾಗಲು ಸೃಷ್ಟಿನಡೆಯದೆ ಶಿವಗೆ ಬಿನ್ನೈಸೆ ||
ಮುಕ್ತಿಮಾರ್ಗವ ಕೆಡಿಸಬೇಕೆ ವಿ |
ಧಾತೃ ನಿನ್ನಯಭೀಷ್ಟವನು ತಾ |
ನಿತ್ತಡಲ್ಲದೆ ನಿಲ್ಲೆ ನೀನೆಂದೆನುತ ಚಿಂತಿಸಿದ || ೧೧ ||

ಕಾಮಹರನಾ ಕ್ಷಣಕೆ ನೆನೆದನು |
ವಾಮೆಯನು ಮನದೊಳಗೆ ತನ್ನಯ |
ಭಾವದಲಿ ನಸುನಗುತ ವಿದ್ಯಾಶಕ್ತಿಯನು ಕರೆದು ||
ಭೂಮಿಯೊಳು ವೈದಿಕವ ಕೆಡಿಸಿ ವಿ |
ರಾಮಶಾಸ್ತ್ರದಿ ಮದ್ಯಮಾಂಸ ಮ |
ಹಾ ಮುಖದಿ ನೀ ಪೂಜೆಗೊಳ್ಳೆಂದೊರೆದನಂಗನೆಗೆ| || ೧೨ ||

ವಾಮೆ ತನಗರುಹಿದಡೆ ಕಮಲದ |
ಳಾಯತಾಂಬಕ ಲಕ್ಷ್ಮಿಗೆಂದನು |
ಭಾಮೆ ನಿನ್ನಂಶದಲಿ ಕಲ್ಪಿಸು ಶಕ್ತಿದೇವಿಯನು ||
ಪ್ರೇಮಸರಿ ಸಂತೋಷ ಸೌಖ್ಯವ |
ಭೂಮಿಯಲಿ ತನ್ನವರಿಗೀವ್ರತ |
ಲಾಮಹಿಮೆ ಮಧುಮಾಂಸದಲಿ ಮುಕುತಿಯನು ಕೆಡಿಸೆಂದ || ೧೩ ||

ಒಳಗೆ ಶಾಕ್ತರು ಹೊರಗೆ ವೈಷ್ಣವ |
ರುಳಿದ ಸಭೆಯಲಿ ಸಾಂಬವರು ವಿ |
ಸ್ಖಲಿತ ವೇದಸ್ಮೃತಿ ಪುರಾಣ ಹರೀಶ್ವರಾಗಮದ ||
ಲಲಿತ ತತ್ವದ ಮಾತನಾಡುತ |
ಬಳಕೆಯಲಿ ಶಾಕ್ತರನು ತಾನೇ |
ಮುಳಿದು ಜರಿವುತ ಕೌಳಿಕರು ಮೋಹಿಸುವರುಳಿದವರ || ೧೪ ||

ಹರಿಬರುತ ಮಥುರೆಯಲಿ ಕುಬುಜೆಯ ।
ನೆರದು ಪಶ್ಯಾಕಾಖ್ಯನೆಂಬಾ ।
ತರಳನನು ಪಡೆಯಲ್ಕೆ ಶೂದ್ರಿಯ ಪುತ್ರನೆಂದರಿದು ॥
ಹರಿನಿರೂಪದಿ ನಾರದನು ಬಾ ।
ಹಿರದ ತಾಂತ್ರಿಕ ತಪ್ತಮುದ್ರೆಯ ।
ಧರಿಸಿ ಪೂಜಿಪ ಪದವನುಪದೇಶಿಸಿದನಾತಂಗೆ ॥ ೧೫ ॥

ಹರನ ನಿಂದಿಪ ವೈಷ್ಣವರ ನಿ ।
ಷ್ಕುರವ ತಾಳಿದ ಶೈವರಾ ಶ್ರೀ ।
ಧರನ ನಿಂದಿಸಲೆರಡು ನಿಂದೆಗೆ ತಾವೆ ಗುರಿಯಾಗಿ ॥
ಹರಿಹರರ ನಿತ್ಯಸ್ವರೂಪವ ।
ನರಿದಡೊಂದೇ ಬ್ರಹ್ಮವದನರೆ ।
ಮರುಳುಗಳು ವಂದಿಸರು ಕಾಣದೆ ತತ್ವನಿಶ್ಚಯವ ॥ ೧೬ ॥

ನೇತ್ರವನು ಪಾದಕೆ ಸಮರ್ಪಿಸಿ ।
ಭಕ್ತಿಯನು ಲೋಕಕ್ಕನುಗ್ರಹ ।
ಚಿತ್ತದಲಿ ತೋರಿದ ಮಹಾವಿಷ್ಣುವನು ಧರೆಯೊಳಗೆ ॥
ಭಕ್ತರೊಳಗಗ್ಗಳೆಯ ನೀಶನ ।
ಮೂರ್ತಿಯದ ತಾ ನಿಂದಿಸುತ್ತಾ ।
ವೇತರಿಂ ಮೆಚ್ಚುವನೆ ಶಿವನರಿಯರು ಜಡಾತ್ಮಕರು ॥ ೧೭ ॥

ಆವ ತೆರದಿಂ ಪೂಜೆಗೊಂಬಾ ।
ದೇವರೆಲ್ಲರು ಶಿವನ ಚೈತ ।
ನ್ಯಾವಲಂಬನದಿಂದ ಪೂಜಾರೂಪರಲ್ಲದಡೆ ॥
ದೇವತನವೆಲ್ಲಿಯದು ಶಿವನೇ ।
ದೇವನಾಗಿಯೆ ಸುಳಿದನೆಂಬೇ ।
ಭಾವಿಸದೆ ಮರೆದರಿಗೆ ಶಿವನಿಂಪಾಜ್ಞೆ ಬಹುದೆಂದ ॥ ೧೮ ॥

ಈ ತೆರದ ಕುಪಥವನು ನರಕವ ।
ನೋತು ತುಂಬಿಸಲಾಗೆವೆಂದರಿ ।
ದಾತಗೀಶ್ವರ ಭಕ್ತಿವೇದಶ್ರದ್ಧೆ ಕೆಡದಿರಲಿ ॥
ಆತಗೀವೆನು ಗತಿಯನೆಂದಾ ।
ಭೂತಪತಿ ವರಪಿತ್ರನೆಂದಾ ।
ಧಾತನಂದನನರುಹಿಪನು ವಿಶ್ವೇಶ ಕರುಣೆಯಲಿ ॥ ೧೯ ॥

**ಏಳನೇಸಂಧಿಯು ಮುಗಿದುದು.**

(ಎಂಟನೆಯ ಸಂಧಿ)

ಭಾ॥ಷ॥ ಮತ್ತೆ ಕೇಳೈ ವ್ಯಾಸ ಕಲಿಯುಗ ।
ವೃತ್ತವನು ಮಾನವರು ತಂತ ।
ಮೃತ್ತೆಯತ್ತಿಗೆ ಮಗಳು ಸೊಸೆಯೊಡ ಹುಟ್ಟದಳು ಹೊರೆದ ॥
ಧಾತ್ರಿಯೊಡೆಯನ ಕಾಂತೆ ಬಾಂಧವ ।
ಭೃತ್ಯರಂಗನೆ ಹರಹರಾ ! ಗುರು ।
ಪತ್ನಿಯೆನ್ನದೆ ನೆರೆವರೇನೆಂಬೆನು ಮಹಾದ್ಭುತವ ॥ ೧ ॥

ಪುರುಷ ಸೇವೆಗೆ ಹೊತ್ತು ನೆರೆಯದ ।
ಪರಿಪರಿಯ ಜಪಹೋಮ ಹರಕೆಯ ।
ಪರಕೆ ತಪ ನೋಹಿಗಳ ಮಾಡಲು ತೆರವು ಸಿಕ್ಕುವುದೆ? ॥
ಪುರುಷ ಪರವೂರಿಂಗೆ ಹೋದರೆ ।
ಮೆರೆವ ಬಣ್ಣವನುಟ್ಟು ನೆರೆ ಸಿಂ ।
ಗರಿಸಿ ಭೋಗಿಪರಾಟ ನೋಟ ಕ್ರೀಡೆ ಭೋಗದಲಿ ॥ ೨ ॥

ಬೇರೆ ಜಪತಪ ಹಾಡು ಕತೆಗಳು ।
ಬೇರೆ ಹಿರಿಯರ ಗೋಷ್ಠಿಯಾರಡಿ ।
ಬೇರೆ ಸತ್ಕಥೆ ಬೇರೆಯಾತ್ಮಧ್ಯಾನವುಂಟೆಮಗೆ ॥
ತೋರಿಕೆಯ ಪತಿ ಮಿಥ್ಯೆಯಿತನ ।
ಸಾರಿ ಫಲವೇನಾ ತನಳಿದರೆ ।
ಸಾರವೇ ಸಹಗಮನ ಫಡ ! ತೆಗೆಯೆಂಬರಬಲೆಯರು ॥ ೩ ॥

ಏಳು ಹೆಜ್ಜೆಯವೊಡನೆ ನಡೆದರೆ ।
ಮೇಲೆ ಸಖನೆಂಬರು ಮನುಷ್ಯಗೆ ।
ವೀಳೆಯವನಿತ್ತಾಗಲಾತಗೆ ಹಿತವನೆನಿಸುವನು ॥
ಕೂಳನಿಕ್ಕಿದ ಮಾತ್ರವಾತನ ।
ಸಾಲವಾತನ ದೇಹವಿದನೆಂ ।
ದೋಲಯಿಸುವಾ ಬಂಟರರಿಯರಕಟಕಟಾಯೆಂದ ॥ ೪ ॥

ಸುಣ್ಣವನು ಕೊಟ್ಟವಗೆ ತಲೆಯನು ।
ಮುನ್ನ ಕೊಟ್ಟವರುಂಟು ವಸ್ತ್ರವ ।
ನನ್ನವನು ಜೀವಿತವನಿತ್ತವಗೇನ ಕೊಡಬೇಕು? ॥
ಕುನ್ನಿ ಮಾನವರರಿಯರೊಡೆಯಂ ।
ಗುನ್ನತ ದ್ರೋಹವನು ಹರಹರ ! ।
ತನ್ನ ಮನದಲಿ ನೆನೆದ ಬಂಟಂಗೇನು ಗತಿಯೆಂದ ॥ ೫ ॥

ಪಿಂಡಸಂಸ್ಕಾರಂಗಳಿಲ್ಲದೆ ।
ಚಂಡಿಕಾಪತಿಭಕ್ತಿ ಹುಟ್ಟದು ।
ಪುಂಡರೀಕಾಂಬಕನ ಮರೆವರು ಪಿತೃಗಳೆಲ್ಲರನು ॥
ಕುಂಡದಲಿ ಕೆಡಹುವರು ಪಾತಕ ।
ತಂಡವನು ವಿರಚಿಸುವರದರಿಂ ।
ಪಿಂಡಸಂಸ್ಕೃತಿಬೇಕು ಮಾನವರರಿಯರದನೆಂದ ॥ ೬ ॥

ಶ್ಲೋಕ॥ ಶತಯಜ್ಞ ಕೃತೇನೈವ ಯಃ ಕಶ್ಚಿಧರ್ಮಸಂಗ್ರಹಃ ।
ಅಂಗುಲ್ಯರ್ಥಂತು ಸೀಮಾಯಾಂ ಹೃತೇನೈವ ವಿನಶ್ಯತಿ ॥

ಪರಧರೆಯನನ್ಯಾಯದಿಂವರೆ ।
ವೆರಳನೊತ್ತಿದವರ್ಗೆ ನೂರ ।
ಧ್ವರದ ಪುಣ್ಯವವಂಗೆ ಬಪ್ಪುದು ನೆಲನ ಕರ್ತಂಗೆ ॥
ದುರುಳರರಿಯದೆ ಹೋರಿ ತಮ್ಮಯ ।
ಧರಣಿ ಹೋಹುದೆನುತ್ತ ವಾಗ್ನಿ ।
ಷ್ಮರದಿ ದೊರೆಕಿಪ ಪುಣ್ಯವನು ಕೆಡಿಸುವರು ಧರೆಯೊಳಗೆ ॥ ೭ ॥

ಕರ್ತರಿಲ್ಲದೆ ಬಿದ್ದ ಭೂಮಿಯ ।
ಧಾತ್ರಿಯುಮರರು ಭೋಗಿಸುತ್ತಿರೆ ।
ಧಾತ್ರಿಯೊಡೆಯಗೆ ಚಾಡಿಯನು ಹರಿಮಿತ್ರನೆಂಬುವನು ॥
ಬಿತ್ತಿ ಕೊಡಲಪಹರಿಸಿದವನಿಪ ।
ಗತ್ತಲಾಯಿತು ನರಕವಿಾಹರಿ ।
ಮಿತ್ರನಿಪ್ಪತ್ತೊಂದುಯುಗದಿ ಪಿಶಾಚನಾಗಿರ್ದ ॥ ೮ ॥

ಈ ಮಹಾ ಪಾತಕಕೆ ಪರಿಹರ ।
ವಾ ಮಹೇಶನ ನಾಮ ನಿರ್ಮಲ ।
ವ್ಯೋಮಗಂಗಾನದಿತರಂಗಸ್ತೋಮ ಮಯಕೂಟ ॥
ಪ್ರೇಮ ನಮಿತ ಸುರಾವಳೀ ಸುಖ ।
ಧಾಮದಾವಲ್ಯಂಗಮಂಗಲ ।
ರಾಮಣೀಯಕಮೂರ್ತಿ ವಿಶ್ವೇಶ್ವರನೆ ಗತಿಯೆಂದ ॥ ॥ ೯ ॥

ಎಂಟನೇಸಂಧಿಯು ಮುಗಿದುದು.

(ಒಂಭತ್ತನೆಯ ಸಂಧಿ)

ಭಾ॥ಷ॥ ವರಜನನಿಯಾದಡೆಯು ಪುತ್ರಗೆ।
ವರುಷ ಹನ್ನೆರಡಾದ ಮೇಲಾ।
ಚರಣಸೇವೆಯ ಮಾಡಸಲ್ಲದು ರೋಗ ಹೊರತಾಗಿ॥
ಕರಗಳಿಂ ತಾಯಂಗಮರ್ದನ।
ಸರಸನಗೆ ಸಹಶಯ್ಯವೆಂಬುದು।
ಕರಣವೃತ್ತಿಗೆ ಬೀಜವೆಂದರಿಯರು ವಿಕಾರಿಗಳು ॥ ೧ ॥

ರಾವಣನ ಕೊಂದಬಳೆ ಸಹಿತಾ।
ದೇವ ರಾಘವನೈತರುತ ಸು।
ಗ್ರೀವನೆಡೆಗೈತಂದು ಭೂಷಣಗಳನು ನೋಳ್ಪೆಂದು॥
ದೇವಿಯರ ಭೂಷಣಗಳಹುದೇ।
ದೇವ ಲಕ್ಷ್ಮಣ ಹೇಳೆನಲು? ಪದ।
ದಾವರೆಯ ಮಂಡಿಕೆಯನೊಂದನೆ ಬಲ್ಲೆನಾನೆಂದ ॥ ೨ ॥

ನಿತ್ಯವಂದನೆಗಾನು ದೂರದಿ।
ಮಸ್ತಕವ ನೆಲಕಿಕ್ಕಿ ಪಾದಗ।
ಳತ್ತ ದೃಷ್ಟಿಯನಿಡಲು ಮಂಡಿಕೆ ತೋರ್ಪುದಂಗದಲಿ॥
ಕೆತ್ತವದ ತುರುಹರಿಯೆಸಬಲೆಯು।
ರತ್ತ ಮೊಗವಿಡಬಾರದೆಂಬುದು।
ಶಾಸ್ತ್ರವೆಂದನು ಸರ್ವರಿಂತಿರಬೇಕು ಕೇಳೆಂದ ॥ ೩ ॥

ಕೆಲವು ದಿನವೇನೇನ ಮಾಡಲು।
ಗೆಲುವು ತೋರ್ಪುದಧರ್ಮ ಧನವನು।
ಗಳಿಸಿದಾ ಬಲ್ಲಿದಗೆ ವತ್ಸರ ಹತ್ತು ಹದಿನಾರು॥
ಕಳಿಯೆ ಸಹಮೂಲಾರ್ಥವೆಲ್ಲವು।
ತಳಪಟವನೈದುವದು ಮೊದಲಿನ।
ಗೆಲುವು ಗೆಲುವೇ ಮೃತ್ಯುವಲ್ಲಾ ಸಕಲಮರ್ತ್ಯರಿಗೆ ॥ ೪ ॥

ಜಾತಿನಾಲ್ಕರೊಳಾದ ಸಂಕರ।
ಜಾತಿ ಸಹ ನೂರೊಂದು ಶೂದ್ರರ।
ಜಾತಿಯೊಳಗಡಗುವುದು ಭೂಸುರ ಶೂದ್ರರೆಂಬೆರಡು॥
ಜಾತಿವುಳಿದುದು ಮತ್ತೆ ಮರ್ತ್ಯರ।
ಜಾತಿಯೊಂದೇಯೆನಿಸಿ ಪುರುಷರ।
ಜಾತಿ ಸ್ತ್ರೀಯರ ಜಾತಿಯೆಂಬೆರಡುಳಿವುದಂತ್ಯದಲಿ ॥ ೫ ॥

ರೌರವಕ್ಕಾ ಮೂರು ಯುಗದೊಳು ।
ಸಾರಿ ಬೀಳುವರಿಲ್ಲದಿರಲಾ ।
ರೌರವವು ಹಾಳಾಗಲಾಗಂತಕನು ದೂರಿದಡೆ ॥
ಮೂರು ಯುಗಗಳ ಮಲವ ಕಲಿಯಾ ।
ಕಾರದಲಿ ಮಾಡಿದನು ಬೇಗದಿ ।
ರೌರವವ ಸಲೆ ತುಂಬಿಸೆಂದಾ ಜ್ಞಾಪಿಸಿದನಜನು ॥ ೬ ॥

ಕೆಡದು ಹೊನಲಲಿ ಹೋಹವರು ಕಂ ।
ಗೆಡದೆ ತಡಿಯನು ನೋಡಿ ಗಿಡುವನು ।
ಹಿಡಿದು ಕರೆಯನು ಸಾರುವಂದದಲಾತ್ಮಹಿತಪದವ ॥
ಪಡೆದು ಸಮ್ಯಜ್ಞಾನವನು ದೃಢ ।
ವಿಡಿದ ಗುರುವನು ಸೇರಿ ಭಕ್ತಿಯ ।
ಬಿಡದೆ ಮೋಕ್ಷವ ಪಡೆವುದಾ ವಿಶ್ವೇಶ ಶಿವಪದವ ॥ ೭ ॥

**ಒಂಭತ್ತನೇ ಸಂಧಿಯು ಮುಗಿದುದು.**

# ಕನ್ನಡ ಆದಿತ್ಯ ಪುರಾಣ

## (ಹತ್ತನೆಯ ಸಂಧಿ)

ಸೂಚನೆ ॥ ಮತ್ತೆ ಬಲಬಂದೆರಗಿ ಕೈಮುಗಿ।
ಪುತ್ತ ಕೇಳ್ದನು ದುರಿತಪ್ರಾಯ।
ಶ್ಚಿತ್ತ ಸರಹಸ್ಯವನು ವಿಸ್ತರಿಸಿದನು ಗುರುರಾಯ ॥

ಭಾ॥ಷ॥ ತಂದೆ ! ಬಿನ್ನಹಪಾತಕಂಗಳ
ಮಂದಮತಿ ಮಾಡಿದಡೆ ಹರಚಿತ
ದಿಂದ ಪರಿಹರವುಂಟೋ? ಇಲ್ಲವೋ? ತಿಳುಹಬೇಕದನು ॥
ಎಂದು ಭಯಭಕ್ತಿಯಲಿ ನುಡಿದಾ
ಕಂದನನು ಬೋಳೈಸಿ ಮುಗುಳಿಂ
ತೆಂದನಂಬುಜಮಿತ್ರನಾತ್ಮಜನಿಂಗೆ ಹಿತವಾಗಿ ॥ ೧ ॥

ಹೇಳಬಾರದು ಮುನಿಪ ಸಾವಿದ
ಕೇಳಿದವರಿಗೆ ನೋವಹುದು ನೀ
ಕೇಳಿದರ್ಥವ ಹೇಳಬೇಹುದು ಪಾತಕಂಗಳನು ॥
ಖೂಳರೊಡರಿಸಬಲ್ಲರಲ್ಲದೆ
ಮೇಲೆ ಪ್ರಾಯಶ್ಚಿತ್ತವನು ಶ್ರುತಿ
ಹೇಳಿದಂತಿರೆ ಮಾಡಬಲ್ಲವರುಂಟೆ ಹೇಳೆಂದ ॥ ೨ ॥

ಭಕ್ತಿಯಿಲ್ಲದೆ ಚಿತ್ತವುಂಟೇ ?
ಧಾತ್ರಿಯಿಲ್ಲದೆ ನಡೆಯಲುಂಟೇ?
ನೇತ್ರವಿಲ್ಲದೆ ನೋಡಲುಂಟೇ ? ವಿಮಲಗುರುವರನ ॥
ಭಕ್ತಿಯಿಲ್ಲದವರ್ಗೆ ಪ್ರಾಯ
ಶ್ಚಿತ್ತವುಂಟೇ ಕಲಿಯುಗದಿ? ಕೇ
ಳ್ಮರ್ತ್ಯರಿಗೆ ಗುರುವಿಲ್ಲ ದೈವವದಿಲ್ಲ ಕೇಳೆಂದ ॥ ೩ ॥

ಹಿಡಿದ ಪಾತಕವೆನ್ನ ನರಕಕೆ
ಕೆಡಹಿದಲ್ಲದೆ ಬಿಡದೆನುತ ಕ।
ಣ್ಗೆಡುತಲಾನಿದಕಾಗಿ ವನದಾವಾಗ್ನಿ ಮಧ್ಯದಲಿ ॥
ಒಡಲನುರುಪುವೆನೆಂಬ ವೇದನೆ
ಯಡಸಿದಲ್ಲದೆ ವಿಧಿಸಬಾರದು
ನುಡಿಗ ಪ್ರಾಯಶ್ಚಿತ್ತವನು ಪಾತಕಿಗೆ ಕೇಳೆಂದ ॥ ೪ ॥

ಅಯ್ದು ಪಾಪಕೆ ತನ್ನ ದೇಹವ
ಕೊಯ್ದು ಕೊಟ್ಟಾಗಲ್ಲದದು ಬಿ
ಟ್ಟೈದಲರಿಯದುದಾವನ್ನೈ ನೀಗುವನು ತನ್ನೊಡಲ ॥
ಮೇದಿನಿಯೊಳಲ್ಪಾಲ್ಪ ಪಾತಕ
ವೈದುವುವು ಹನಿಗೂಡಿ ಹಳ್ಳಗ
ಳಾದವೊಲು ಕೇಳಲ್ಪಪಾತಕವೆನಲು ಬೇಡೆಂದ ॥ ೫ ॥

ನಿತ್ಯಕರ್ಮ ವಿಲೋಪವಿಲ್ಲದೆ
ಮತ್ತೆ ಸರ್ವತ್ರರುಗಳೆನಿಸಿದ
ಚಿತ್ತಶುದ್ಧಿ ಜ್ಞಾನಿಗಳಿಗೊಂದಲ್ಪ ಪಾಪಗಳು ॥
ಹತ್ತಿದರೆ ಪರಿಹರಿಸಿ ಕೊಂಬುದ
ಕುತ್ತಮರು ಬಳಲಿದರು ಮಿಕ್ಕಿನ
ಮತ್ತಜೀವರು ಪರಿಹರಿಸಿಕೊಳಲಾರ್ಪರೇಯೆಂದ ॥ ೬ ॥

ತನುಜದೃಷ್ಟವ ಕೇಳು ಮಾಂಡ
ವ್ಯನ ತಪಕ್ಕಿದಿರುಂಟೆ ? ಶೂಲದೊ
ಳೆನಿತುದಿನ ಬಿದ್ದಿರ್ದನೈ ಯಮನಂತೆ ಪರಗೃಹದ ॥
ಇನಿತು ಗೋಧಿಯ ತಿಂದ ಮಾತ್ರಕೆ
ವನಿತೆ ಮರೆ (ಹೊಂ)ಡದೊಳು ಬಿದ್ದಳ
ದೆನಿತುದಿನವೈ ಮಿಕ್ಕ ಮನುಜರ ಪಾತಕವೇಕೆಂದ ॥ ೭ ॥

ಗಂಗೆ ಮೊದಲಾಗಿರ್ದ ವರತೀ
ರ್ಥಂಗಳ ಸ್ನಾನದಲಿ ಪಾತಕ
ಹಿಂಗವುದು ನರರಲ್ಲಿ ಮಾಡುವ ದುಶ್ಚರಿತ್ರದಲಿ ॥
ಸಾಂಗವಾಗಲು ವಿಧಿಗಳದರಿಂ
ಹಿಂಗವಘವದ ಕಲ್ಪಪುಣ್ಯವೆ
ಸಂಗ್ರಹಿಸಿ ಜನ್ಮಾಂತರಕ್ಕೊದಗುವುದು ಕೇಳೆಂದ ॥ ೮ ॥

ಕಾಶಿಯೊಳು ಮಡಿದರಿಗೆ ಪಾತಕ
ನಾಶವಪ್ಪುದು ಮುಕ್ತಿಯೆನೆ ತ
ದ್ದೋಷವುಳ್ಳಡೆ ಕಾಲಭೈರವನಾಜ್ಞೆಯನು ಮಾಡಿ ॥
ಈಶಗೊಪ್ಪಿಸೆ ಮುಕ್ತಿಯಲ್ಲದೆ
ದೋಷವಳಿಯದೆ ಮುಕ್ತಿಯೇ ನುಡಿ
ಕಾಶಿಗಿಂತಾಯಿತ್ತು ಮಿಕ್ಕಿನ ಪಾತಕವೇಕೆಂದ ॥ ೯ ॥

ಅಲ್ಪಪಾತಕವೈಸೆ ಇದನಾ
ನಲ್ಪದಲಿ ಪರಿಹರಿಪೆನೆಂಬಾ
ಸ್ವಲ್ಪ ಬುದ್ಧರ ನುಡಿಯೊಳೇ ಫಲವದನೆ ಮಾಡುತಿರೆ ॥
ಅಲ್ಪಪಾತಕ ಕೂಡಿ ಕೂಡಿಯ
ನಲ್ಪವಾಗಿ ಮಹೋಗ್ರಪಾತಕ
ವಪ್ಪವದರಿಂದಲ್ಪವೆನ್ನದೆ ಮಾಡಬೇಡೆಂದ ॥ ೧೦ ॥

ಶ್ರೀಮದಮಲ ವಿಭೂತಿ ರುದ್ರಾ
ಕ್ಷಾ ಮಹಾಶಿವಲಿಂಗ ಮಂಗಲ
ಧಾಮ ಪುಣ್ಯಸ್ತೋಮ ವರ ಪಂಚಾಕ್ಷರಿಯ ಮಂತ್ರ ॥
ಕಾಮಹರಸುಕ್ಷೇತ್ರ ಕಾಶೀ
ಧಾಮವೆಂಬಿವನೈದ ಬೆಸಸಿದ
ನಾ ಮಹಾಪಾತಕಕೆ ಹರಚಿತ ಮಗನೆ ಕೇಳೆಂದ ॥ ೧೧ ॥

ಇವನು ಕೇಳ್ವವರಿಂಗೆ ಕಲಿಕಾ
ಲದಲಿ ನಿರ್ಭಯವಖಿಲದುರಿತೌ
ಘದ ನಿವಾರಣ ವಿಹದೊಳಾಚರಣಾದಿ ಸುಖಸಿದ್ಧಿ ॥
ಮದನಹರಪದ ಭಕ್ತಿ ಪುಹದ
ಭ್ಯುದಯ ನಿರ್ಮಲ ಮುಕ್ತಿಲಕ್ಷ್ಮಿಯೊ
ಳೊದಗುವುದು ಪೈವಾಹ ಮಂಗಲವೆಂದನಾದಿತ್ಯ ॥ ೧೨ ॥

ಹತ್ತನೆಯ ಸಂಧಿ ಮುಗಿದುದು.

(ಹನ್ನೊಂದನೆಯ ಸಂಧಿ)

ಸೂಚನೆ॥ ಕಲಿಯುಗದ ಬರುಹೊಯ್ಲು ನಿಳೆಯೊಳು
ಗೆಲುವುಪಾಯವ ಕೇಳಿ ಕಾಶೀ
ಸ್ಥಳಕೆ ಬಂದಾ ವ್ಯಾಸ ಕಂಡನು ವಿಶ್ವವಲ್ಲಭನ ॥

ಭಾ॥ಷ॥ ಮುಂದೆ ಬಹ ಕಲಿಯುಗದ ಧರ್ಮವ
ನಂದು ಮುದದಿ ಸನತ್ಕುಮಾರ ಮು
ನೀಂದ್ರ ವಿಸ್ತರಿಸಿದರೆ ಕೇಳುತ ದುಃಖಮಯವಪ್ಪ ॥
ಸಿಂಧುವಿನ ಮಧ್ಯದಲಿಮುಳುಗು
ತ್ತಿಂದನೆಲೆ ಗುರುವರನೆ ಸಜ್ಜನ
ವೃಂದಕಾವುದು ಗತಿಯೆನುತ್ತಿರಗಿದನು ಗೋಳಿಡುತ ॥ ೧ ॥

ಎತ್ತಿದನು ಶಿಷ್ಯನನು ಪರಪುರು
ಷಾರ್ಥ ಸುರಭೂಜನನು ತನ್ನಯ
ಚಿತ್ತದಲಿ ಕರಗುತ್ತ ಕರುಣಾಮೃತವ ಸೂಸಿದನು ||
ಪುತ್ರ ನೀನಂಜದಿರು ಕಲಿಯುಗ
ವೃತ್ತಿ ಬಂದಂದವನು ಗೆಲುವಡೆ
ಉತ್ತಮೋತ್ತಮವಪ್ಪ ಸಾಧನ ಮುನಿಪ ಕೇಳೆಂದ || ೨ ||

ತಿಳಿದು ನೋಡಿದಡಲ್ಪದಿನದೊಳು
ಗಳಿಸಬೇಹುದು ಬಹಳ ಧರ್ಮವ
ನುಳಿದ ಯುಗಪವರೆಲ್ಲ ಬಯಸುವರಂತೆ ಕಲಿಯುಗದ ||
ಸುಲಭವಾಯುಗದಲ್ಲಿ ಧರ್ಮವೆ
ಬಳೆವುದದ್ರಿಯ ತೆರದಿನದರಿಂ
ಕಲಿಮಹೇಶ್ವರಯುಗವೆನಿಸಿ ತಿಳಿಯೊಳಗೆ ಕೇಳೆಂದ || ೩ ||

ಅದುವೆ ಸದ್ಗುರುವರನ ಕರುಣದ
ಲೊದಗ ಬೇಕಲ್ಲದಡೆ ಮತ್ತಾ
ಉದಧಿವೇಷ್ಟಿತಧರೆಯೊಳಗಣಿತ ತೀರ್ಥವನವುಂಟು ||
ಬದರಿ ನೈಮೀಶಾದಿಪುಣ್ಯ
ಪ್ರದ ವಿವರ್ಧನವೀವುದಂದಿನ
ಲೊದದು ಕಳೆನರು ಕಲಿಮಲಂಗಳನಲ್ಲಿ ನೆಲಸಿರ್ದು || ೪ ||

ಕಾಶಿಯಾರೈ ಪೂರ್ಣಸಂವಿ
ತ್ಕಾಶನಪ ಪರಬೊಮ್ಮ ಪರವಿ
ಶ್ವೇಶನಾಕೃತಿ ವಿಮಲತೇಜಃಪುಂಜ ಲಿಂಗವನು ||
ಕಾಶವನು ತಿಳಿ(ಯದ) ಜಡರ್ಗಾ
ಕಾಶಿಪುರರೂಪದಲಿ ತೋರಿಪ
ಕೈಸೆ ಲೋಕದ ಭೂಮಿಯಂದದಿ ಭೂಮಿಯಲ್ಲೆಂದ || ೫ ||

ಅಲ್ಲಿ ಕಲಿ ಕಾಮಾಂತಕರ ಸುಳು
ಹಿಲ್ಲ ಭೈರವದಂಡಪಾಣಿಗ
ಳಲ್ಲಿ ಶಿಕ್ಷಾರಕ್ಷೆ ಗೊಡೆಯರು ಮಿಕ್ಕವರ ಬಲುಹು ||
ಕೊಳ್ಳವಲ್ಲಿಗೆ ಪೋಗು ನಿನಗಿ
ನ್ನಿಲ್ಲ ಭಯವೆನಲೆದ್ದು ಕರಯುಗ
ಪಲ್ಲವವ ಮುಗಿದೆರಗಿ ಬಿನ್ನವಿಸಿದನು ಗುರುವರಗೆ || ೬ ||

ಗುರುವೆ ನಿನ್ನಯ ಚರಣ ಸೇವೆಯೆ
ಪರಮಸೇವೆ (ಯು ನೀನೆ) ವಿಶ್ವೇ
ಶ್ವರನೆನಗೆ ಬೇರಿಲ್ಲ ನಿಜಸನ್ನಿಧಿಯೊಳಿಹೆನದಕೆ ॥
ಕರುಣದಿಂದಲನುಗ್ರಹಿಸಿಯು
ದ್ಧರಿಸಬೇಕೆನಲಪ್ಪಿ ಯೋಗೀ
ಶ್ವರ ಶಿರೋಮಣಿ ಮೆಚ್ಚಿ ಮುದದಿಂ ವ್ಯಾಸಗಿಂತೆಂದ ॥ ೭ ॥

ಮರಹಿನಿಂ ನಿನಗೊಮ್ಮೆ ಮಾಯೆಯ
ಕರುಬತನದಿಂ ದೇವ ವಿಶ್ವೇ
ಶ್ವರನ ಕೃಪೆ ತೊಲಗುವುದು ಶಿಷ್ಯರು ಸಹಿತ ನಿನ್ನುವನು ॥
ಹೊರವಡಿಸಲಾ ಸ್ವಾಮಿಯನು ನೀ
ಭಜಿಸಿದಡೆ ಕರುಣಾಳು ನಿನ್ನು
ದ್ಧರಿಸುವನು ನೀನಂಜಬೇಡೆಂದಭಯವನು ಕೊಟ್ಟ ॥ ೮ ॥

ಎನೆ ಹಸಾದನೆನುತ್ತ ನಿಜಗುರು
ವಿನ ಪದಾಬ್ಜಕ್ಕೆರಗಿ ಯೋಗೀಶ್ವರನ
ನಿಜಮೂರ್ತಿಯನು ತಾ ಬಿಡಲಾರದೊಳಗೊಳಗೆ ॥
ಮನದ ಮಧ್ಯದೊಳಿಟ್ಟು ಮೆಲ್ಲನೆ
ಮುನಿಪ ಕಳುಹಿಸಿಕೊಂಡು ಶಿಷ್ಯರ
ಜನಸಹಿತ ಹೊರವಂಟು ಕಾಶೀಪುರಕೆ ನಡೆತಂದ ॥ ೯ ॥

ತನ್ನನೇ ತನ್ನೊಳಗೆ ತಾನೇ
ಪೂರ್ಣನಪ್ಪಯನಮಲನೆನ್ನಿಂ
ದನ್ಯವಿಲ್ಲೆಂದರಿದೆನಿಪ್ಪುದ ಮರೆದು ತಾನೆಂದು ॥
ಪೂರ್ಣನಾಗಿರೆ ಮತ್ತೆ ಮಾಯಾ
ಕನ್ನೆ ಮುಸುಕಲು ಪೊಗಳ ತೊಡಗಿದ
ನುನ್ನತಸ್ತುತಿ ಪಂಚರತ್ನ ಗ್ರಂಥಮುಖದಿಂದ ॥ ೧೦ ॥

ಕರುಣೆಸಾದಡೆ ನಿನ್ನ ನಿರ್ಗುಣ
ಪರಮ ತೇಜೋಭ್ಯುದಯಭಕ್ತಿಯ
ನೆರಡನೆಯ ವರವಿಲ್ಲವೆನವಿತ್ತಡಗಲಾ ಶಿವನ ॥
ಪರಮ ತೇಜಃಪುಂಜನಿರ್ಮಿತ
ಮುರುಳಿಯನೆ ಹೊರಳುತ್ತ ಹೊರವಂ
ಟರಿದೆನಿಪ ಶಿವಲಿಂಗಯಾತ್ರೆಯ ಮಾಡುತೈತಂದ ॥ ೧೧ ॥

ಹಿಂದೆ **ದಕ್ಷನು** ವಾರಣಾಸಿಗೆ
ಬಂದು ತನ್ನಯ ಪೆಸರ ಲಿಂಗವ
ನಂದು ಕಲ್ಪಿಸಿ ವೇದವಿಧಿಯಲಿ ಪೂಜೆಯನು ಮಾಡಿ ||
ಬಂದ ಶಂಭುದ್ರೋಹವನು ಕಳೆ
ದಂದು ವಿಶ್ವೇಶ್ವರಮಹಾ ದಯೆ
ಯಿಂದ ಮುಕ್ತಿಯ ಪಡೆದನೆಂದನು **ಭಾನು** ಮನುವಿಂಗೆ ||೧೨||

**ಹನ್ನೊಂದನೆಯ ಸಂಧಿ ಮುಗಿದುದು.**

(ಹನ್ನೆರಡನೆಯ ಸಂಧಿ)

ಸೂಚನೆ|| ದಕ್ಷನೇತಕೆ ಗರ್ವಿಸಿದನಾ
ದಕ್ಷಗೀಶ್ವರನೇಕೆ ಮುಳಿದನು
ಶಿಕ್ಷೆ ಮಾಡಿದನೆಂದಡೆಂದನು ಸುತಗೆ ಮಾರ್ತಾಂಡ ||

ಭಾ||ಷ|| ಮೊದಲ ದಕ್ಷನು ಬ್ರಹ್ಮನಂಗು
ಷ್ಠದಲಿ ಪುಟ್ಟಿದನೆರಡನೆಯ ಜ
ನ್ಮದಲಿ ಪ್ರಾಚೇತಸನ ಮಗನವಗಜನು ಭುವನಗಳ ||
ಅಧಿಪತಿತ್ವವನೀಯೆ ಕನ್ಯೆಯ
ರುದಿಸಿದರುವತ್ತ ನರನಿತ್ತನು
ವಿಧಿಯ ಪೌತ್ರಾಪ್ಯರಿಗೆಯೊಬ್ಬಳನೀಶ್ವರಂಗಿತ್ತ ||೧||

ಎಲ್ಲರಿತ್ತರು ಕಪ್ಪವನು ಸಿರಿ
ವಲ್ಲಭನು ಮನ್ನಿಸಿದನಜನೆನ
ಗೆಲ್ಲ ಭಾಗ್ಯವನೊಪ್ಪಿಸಿದನಿನ್ನುಳಿದ ಸುರಗಿರರು ||
ಇಲ್ಲಿ ಯೀಶ್ವರನೊಬ್ಬನೇ ಕಡು
ಬಲ್ಲಿದನು ಎನ್ನಯ ಕುಮಾರಿಯ
ವಲ್ಲಭನು ಮನ್ನಿಸನೆ ನೋಡುವೆನೆನುತ ಹೊರವಂಟ ||೨||

ಬರಬರಲು ದೂರದಲಿ ಘನವಿ
ಸ್ಫುರಿತ ತೇಜಃಪುಂಜನೇ ಅವ
ತರಿಸಿ ತೋರಿತು ಕಾಣದಾದನು ಗಿರಿಯ ಮಾರ್ಗವನು ||
ಹರನ ಮಾವನು ನಾನುನನಗೀ
ಗಿರಿಯು ತೋರದದೇಕೆ ಮುಂದಣ
ಪರಿಯದಾವುದೊ ಹರಹರೆನೆ ಕಾಣಿಸಿತು ರಜತಾದ್ರಿ ||೩||

ಇದ್ದುದಗಣಿತ ಹರಿ ಪಿತಾಮಹ
ರುದ್ರವಸು ಗಂಧರ್ವಯಕ್ಷರು
ಸಿದ್ಧಚಾರಣ ಯೋಗಿ ಮುನಿ ಶುಕ್ರಗ್ರಹಾದಿಗಳು ||
ಶುದ್ಧಮತಿದೃಷ್ಟಿಗಳು ಶಿವನೊಳ
ಗದ್ದು ಜಯಜಯಯೆನುತ ಭಕ್ತಿಸು
ಖಾಬ್ಧಿಮಯವಾಗಿರಲು ಕಂಡನು ದಕ್ಷನಾ ಸಭೆಯ || ೪ ||

ಎನಿತು ಮಹಿಮೆಗಳಾದಡೆಯು ದ
ಕ್ಷನ ದುರಾಗ್ರಹವಾದಡೆಯು ಮನ
ಸಿನೊಳು ಕುಹಕವನಿಕ್ಕಿ ವಿಶ್ವಾಧೀಶ್ವರನ ಮಾಯಾ ||
ವಸಿತೆ ಹೊಕ್ಕಳು ಮಾವನೆನಗಳಿ
ಯನು ಶಿವನು ಮನ್ನಿಸುವನೆಂದೇ
ನೆನವುತಿರೆ ಜಿರಗಾಯ್ತು ಸಭೆ ಶಿವಗೆರಗದದ್ಭುತಕೆ || ೫ ||

ನೋಪರವನನು ನುಡಿಸದಿರೆ ಮಾ
ತಾಡಿದನು ತನ್ನೊಳಗೆ ಮರುಳಗೆ
ಮಾಡಿದೆನು ಮಡುವೆಯನು ಮಗಳನು ಮೋಸಹೋದೆನಲಾ ||
ಮಾಡಬೇಡವೆ ತನಗೆ ಪೂಜೆಯ
ಗಾಢಗರ್ವ ಶಿವಂಗೆ ತಕ್ಕುದ
ಮಾಡುವೆನು ತಾನೆನುತ ಕೋಪವಂಟನು ಸಭಾಂತರವ || ೬ ||

ದಕ್ಷ ನಾನೆಲ್ಲರಿಗೆ ಲೋಕದ
ಶಿಕ್ಷೆ ರಕ್ಷೆಗಳಿಲ್ಲ ವೆನ್ನದು
ಲಕ್ಷ್ಯವೇ ಎನಗೀಶನನು ಹೊರಗಳೆದು ಯಜ್ಞವನು ||
ದಕ್ಷಿಣಸ್ಫೂರ್ತಿಯೊಳು ಹರಿಯ ಸ
ಮಕ್ಷೆಯಲಿ ಮಾಡುವೆನೆನುತ ಮುಂ
ದೀಕ್ಷಿಸದೆ ಫಣಿಶಯನನುದ್ದಿಡೆಗಾಗಿ ನಡೆತಂದ || ೭ ||

ಅಗಣಿತ ಸ್ತೋತ್ರದಲಿ ಹರಿಯನು
ಹೊಗಳಿದರೆ ಮೆಚ್ಚಿದನು ಕಾವೆನು
ನೆಗಳು ಯಜ್ಞವನೆಂದು ಕಳುಹಲು ಬಂದು ಸುರಗುರುವ ||
ಭೃಗುಪುಲಸ್ತ್ಯರು ಮುಖ್ಯರರ್ಥಿಂ
ದುಗಳನಿಂದ್ರಾದಿಗಳ ಕರೆಸಿದ
ರಗಡು ದಕ್ಷನ ವಿಾರಲಾರದೆ ಬಂದರೆಡೆಗೊಳುತ || ೮ ||

ಭೂತಪತಿ ವಿರಹಿತದ ಯಜ್ಞಕೆ
ಭೂತಪಂಚಕದಿಂದ ಬಹಳೋ
ತ್ಪಾತಗಳು ಹುಟ್ಟಿದಡೆ ನಡುಗುತ್ತಿರಲು ಜಗವೆಲ್ಲ ॥
ಏತಕಂಜುವಿರೆನಗೆ ಲಕ್ಷ್ಮೀ
ನಾಥನಿಹನಧ್ವರವ ನಡೆಸೆಂ
ದಾತ ದಕ್ಷನು ಗರ್ಜಿಸಲು ಕೈಕೊಂಡುದಖಿಳಜನ ॥ ೯ ॥

ಆ ಮಹಾಸಂಭ್ರಮವನೀಕ್ಷಿಸಿ
ಭಾಮೆ ತನ್ನಯ ಮನದೊಳಗೆ ಕಡು
ಪ್ರೇಮ ಬಲಿದು ಮಾಮ ಮಘುರೇ ಮಖಮಹೋತ್ಸವವ ॥
ತಾಮಸರು ರಚಿಸಿದರೆ ಶಿವಗವ
ಮಾನವೇ ಸುಖವೆನುತ ಭುವನ
ಸ್ತೋಮವಂದ್ಯನ ರಾಣಿ ಮರುಗಿದಳೀಶನನು ನೋಡಿ ॥ ೧೦ ॥

**ಹನ್ನೆರಡನೆಯ ಸಂಧಿ ಮುಗಿದುದು.**

# ಕನ್ನಡ ಆದಿತ್ಯ ಪುರಾಣ

(ಹದಿಮೂರನೆಯ ಸಂಧಿ)

ನೋಡಿದನು ಪರಮೇಷ್ಠಿ ಹಿಮಕರ
ಚೂಡನಿಲ್ಲದ ಯಜ್ಞವಿದು ಕಡೆ
ಗೂಡಲರಿಯದೆನುತ್ತ ದೀಕ್ಷಿತನಾದವನ ಕರೆದು ||
ಕೂಡೆ ನುಡಿದನು ವಿಶ್ವದೊಡೆಯನ
ನೋಡಿ ಬಿಜಯಂಗೈಸಿ ತಾರದೆ
ಮಾಡುವೀ ಅಧ್ವರದಿ ಸುಖವಿಲ್ಲೆಂದನಬುಜಭವ || ೧ ||

ಭುವನದೊಡೆಯನು ವಿಷ್ಣುವಲ್ಲದೆ
ಶಿವನು ಬೇಕೆಂದಾವ ಪದ್ಧತಿ
ನಿವಗಿದೇತಕ್ಕಕಟ ! ಆತನ ಪಕ್ಷಪಾತಮತಿ ||
ಎವಗೆ ಹರಿಬಲವುಂಟಲಾ ! ಮಾ
ಧವನು ಸಲಹುವನೆನಲು ಕೋಪದೊ
ಳವಗೆ ನುಡಿದನು ನಿನ್ನ ಭಾಗ್ಯಕ್ಕಿದುವೆ ಕಡೆಯೆಂದು || ೨ ||

ಕೇಶವನು ಪರದೈವವೆಂದಿ
ನ್ನೀ ಶಿರವ ಹೋಗಾಡಿದೆನು ಪರ
ಮೇಶ ವಿರಹಿತಯಜ್ಞವಿದು ನಾವಿರ್ದಡಿನ್ನೆಲ್ಲ ||
ಶೇಷಮಸ್ತಕವಳಿವವೆಂದಾ
ಹಂಸವಾಹನನಾಗಿ ಯಜನಾ
ಕಾಶವಡರಿದನಕ್ಕಟಕಟಾ ! ದಕ್ಷನೆಂದೆನುತ || ೩ ||

ಕರೆಯಲಟ್ಟಿದಡಾ ದಧೀಚಿಯು
ಮರುಳು ದಕ್ಷನು ಮುನ್ನವಾತನು
ಪರಶಿವ ಪ್ರೀತಿಯಲಿ ಮಾಡುವ ಯಜ್ಞವೆನುತೆದ್ದು ||
ಬರುತ ಕಂಡನು ವಿಷ್ಣುರಕ್ಷಿತ
ಧುರ ಮಹಾಧ್ವರ ಭಾಗ್ಯವನು ಶಂ
ಕರನ ಕಾಣನು ಸುರರ ಮಧ್ಯದ ಸಿಂಹಪೀಠದಲಿ || ೪ ||

ಎಲವೊ ದಕ್ಷ ದುರಾತ್ಮ ನೀನ
ಗ್ಗಳದ ದೈವವಿರೋಧದೀಕ್ಷೆಯು
ತಳೆದಡಹುದೇ ಹರಿಯ ಬಲುಹುಂಟೆಂದು ಗರ್ವದಲಿ||

ಜಲಜನಾಭನು ಕಾಯ್ವನೇ ಹರ
ಮುಳಿದರಕಟಾ ! ನಿನ್ನ ಭಾಗ್ಯದ
ಬಲುಹಿನಿಂದಜ್ಞಾನ ಕವಿದುದಲಾ ! ಶಿವಾಯೆಂದ ॥ ೫ ॥
ಪರಶಿವನೆ ನಿಜಮೂರ್ತಿ ನೀನೀ
ದುರುಳ ದಕ್ಷನ ವಹಿಸಿಕೊಂಬುದು
ನಿರುತವಲ್ಲವಿದಾವ ಮಾಯೆಯೊ ನಿನ್ನ ಹೃದಯವನು ॥
ಅರಿದೆನೆಂದಡೆ ನಕ್ಕನಾ ಶ್ರೀ
ವರನು ತನ್ನಯ ಮನದೊಳಗೆ ತಾ
ನರಿವ ಮಾಯಾಕಾರನೆಂಬುದನಾರು ಬಲ್ಲವರು ? ॥ ೬ ॥

ಮೀನ ಮಗನೇ ವಿಷ್ಣು ಕೂರ್ಮನ
ಸೂನುವೇ ಸೂಕರನ ಸುತನೇ
ತಾನು ವೃಗವೇ ತಿರುಕನೇ ಪರಾತ್ಪಿನ ಘಾತುಕನೇ ॥
ಹೀನಮರ್ತ್ಯನೆ ಗೊಲ್ಲರಣುಗನೆ
ಜೈನನೇ ರಾವುತನೆ ಭಕ್ತರ
ಸೂನು ಕಿಂಕರರಾರ್ಗೆ ಹರಿಹರರವರು ಕೇಳೆಂದ ॥ ೭ ॥

ಅಮೃತವನು ನಿರ್ಜರರಿಗೀಯಲು
ರಮಣಿಯಾದನು ವಿಷ್ಣುವನು ಮೃಡ
ನಮರಿದಾಕ್ಷಣ ಚಂಡ ಭೈರವರೊಗೆದರವರಿಂದ ॥
ವಿಮಲತರ ಶಕ್ತಿಸ್ವರೂಪಿನ
ರಮಣ ರಮಣಿಯರೀಶ ಹರಿಗಳು
ರಮಣನಾಜ್ಞೆಯ ಮೀರಿನಡೆವಳೆ ರಮಣಿ ಹೇಳೆಂದ ॥ ೮ ॥
ಹರಿ ಮುನಿಯೆ ಹರ ಕಾಯಬಲ್ಲನು
ಹರ ಮುನಿಯೆ ಹರಿ ಕಾಯಲರಿಯನು
ಹರನು ಹೊರತಾದವರು ಮುನಿದರೆ ಕಾಯ್ವನೀ ವಿಷ್ಣು ॥
ಮರುಳನಾಗದೆ ಕೆಟ್ಟುಹೋಗದೆ
ಸಿರಿಯುನನುಭವಿಸುವರೆ ಪರಮೇ
ಶ್ವರನ ಬಿಜಯಂಗೈಸಿ ತಂದಧ್ವರವನೆಸಗೆಂದ ॥ ೯ ॥
ತಿಳಿದೆನವನಿದು ಭೇದತಂತ್ರದ
ಬಳಕೆಯೆನ್ನನು ಬಿಟ್ಟುಕೊಡುವರೆ
ಜಲಜನಾಭನು ಮುನಿಪಗಳಹಿದರೇನು ವಿಪ್ರನಲಾ ॥

ಮುಳಿಯಬಾರದೆನುತ್ತ ತನ್ನೊಳ
ಗೊಳಗೆ ಸ್ಮರಿಸುತ್ತಂಜ ಬೇಡೀ
ಹುಳುಕ ಭೂಛುರವಚನಕೆಂದನು ದಕ್ಷನಾಸಭೆಗೆ ॥ ೧೦ ॥

ಕೇಳಿದನು ಮುನಿ ದಕ್ಷನಾಡಿದ
ಖೂಳವಚನವನೆಲ್ಲ ಭುವನದ
ಪಾಲಕತ್ವವೆ ದುಷ್ಟ ಪರಶಿವದ್ರೋಹಿಯೇ ನಿನಗೆ ॥
ಮೇಳವಿಸಿದೀ ಯಜ್ಞವನು ದಿವಿ
ಜಾಳಿಯನು ಯಜ್ಞದವ ನಿನ್ನನು
ಧೂಳಿಪಟ ಮಾಡುವೆನೆನುತ ಗದಗದಿಸಿದನು ಮುಳಿದು॥೧೧॥

ಮುರಿದು ಹೋಗಲಿ ವಿಷ್ಣು ದಿವಿಜರ
ಕರುಬುತನವಕ್ಕುಳಿಸಿ ಕೈಕಾ
ಲ್ಮುರಿದು ಕಣ್ಕಿವಿ ಮೂಗುಬಾಯ್ ಹಲ್ಲುಗಳು ಖಂಡಿಸಲು॥
ಉರುವ ದಕ್ಷನ ತೋರ ತಲೆಯದು
ಹರಿದು ಬೀಳಲಿ ಮತ್ತೆ ಮುಂಡಕೆ
ಕುರಿಯ ತಲೆ ಹತ್ತಲಿ ದುರಾತ್ಮಂಗೆಂದನಾ ಮುನಿಪ ॥೧೨ ॥

ಹೊರವಡೀ ಶಾಪಕೆ ವಿವೇಕದಿ
ಹೊರಗೆನಿಸಿದವರುಗಳು ಶಿವನೊಳ
ಗೆರಕವುಳ್ಳವರಂದು ರೌರವಭೀತರಾದವರು ॥
ಹೊರಗೆನಲು ಕವಡೆಗಳ ರಾಸಿಯೊ
ಳುರುವಕಲು ಬಿದ್ದಂತೆ ಸುಜನರು
ಹೊರವಡುತ ನಡೆದರು ಶಿವಾ ಬದುಕಿದೆವು ನಾವೆನುತ॥೧೩॥

ಬಂದು ಈಶ್ವರಸನ್ನಿಧಿಗೆ ಶಿವ
ನಿಂದೆಗೇಳಿದ ದೋಷವನು ಕೆಡ
ಲೆಂದು (ನೀ)ರಾಹಾರದಲಿ ಪಂಚಾಕ್ಷರಿಯ ಜಪವ ॥
ಒಂದು ತಿಂಗಳು ಮಾಡಿ ಭಕತಾ
ನಂದವಾರ್ಧಿಯೊಳಾಳುತಿರಲಂ
ದಾ ದಧೀಚಿ ಮುನೀಂದ್ರನೆಸೆದನು ಮಗನೆ ಕೇಳೆಂದ ॥೧೪॥

(ಹದಿನಾರನೆಯ ಸಂಧಿ ಮುಗಿದುದು)

## ಹದಿನಾಲ್ಕನೆಯ ಸಂಧಿ

ಚಾರುಮತಿ ಸುತ ಕೇಳು ಧವಳಶ
ರೀರ ಸಿತಕೌಪೀನ ಧವಳಾ
ಕಾರ ವೀಣಾದಂಡ ಮೌಂಜಿ ಕಮಂಡಲಾನ್ವಿತನು ||
ನಾರದನು ಶಿವತತ್ವ ವಿಮಲ ವಿ
ಶಾರದನು ಶರದಭ್ರ (ಶುಭ್ರ) ಮ
ಹಾರುಚಿರನೈತಂದನಾ ಕೈಲಾಸಪರ್ವತಕೆ ||೧||
ದೇವದೇವಿಯರಿಂಗೆ ಬಿನ್ನಹ
ಮಾವ ದಕ್ಷನು ಹರಿ ಪಿತಾಮಹ
ದೇವ ಋಷಿಗಣ ಸಹಿತಲಾ ತೊಡಗಿದನು ಯಜ್ಞವನು ||
ನೀವು ಚಿತ್ತೈಸುವುದು ತನಗೆ ಮ
ಹಾವಿರೋಧವೆನುತ್ತ ರಕ್ಷೆಗೆ
ಮಾವರನ ಬಲವುಂಟೆನುತ ಗರ್ವಿಸುತಲಿಹನೆಂದ ||೨||
ಕಳುಹಿದಳು ನಿಜಕಳೆಯ ದಕ್ಷನ
ಬಳಿಗೆಯಾತನ ಹೃದಯವನು ನೀ
ತಿಳುಹಿ ಬುದ್ಧಿಯ ಹೇಳು ಶಂಭುದ್ರೋಹವನು ಬಿಟ್ಟು ||
ಅಳಿವಿ ಭಾಗ್ಯವನುಣಲಿಯಲ್ಲದ
ಡಳಿದು ಹೋಗಲಿಯೆನುತ ಗಿರಿಜಾ
ಲಲನೆಯಾಲಯಕಾಗಿ ವಿಭವದಿ ಬಂದಳಾ ದೇವಿ ||೩||
ಅಕ್ಕ ಬಂದಳೆನುತ್ತ ದಕ್ಷನ
ಮಕ್ಕಳೈತಂದೆಲ್ಲರಪ್ಪುತ
ಮಿಕ್ಕ ಬಂಧುಗಳವುರತತಿ ಭಕ್ತಿಯಲಿ ಕಾಣಿಕೆಯ ||
ಉಕ್ಕಿ ಕರಸದೆ ಬಂದಳೆಂದೆನೆ
ಮಕ್ಕಳಿಗೆ ಸರಿಯುಂಟೆ ತಂದೆಗೆ
ಮಕ್ಕಳಿಗೆ ಮುನಿಸೇಯೆನುತ ಕೊಂಡಾಡಿತಖಿಳಜನ ||೪||
ಆರು ಕರೆದರೊ ತನ್ನ ನೆಲ್ಲ ಕು
ಮಾರಿಯರ ಕರೆದಂತೆ ಕರೆಯದೆ
ನಾರಿ ನಾಚಿಕೆಯಿಲ್ಲವೇ ನಾನಿತ್ತ ಬಳುವಳಿಯ ||
ಚಾರುಭಾಗ್ಯವನುಂಡು ತನ್ನ ಶ
ರೀರವನು ಹೊರವುತ್ತ ಗೊರವನ
ಸೇರಿಕೊಂಡಿರಲೆಂದರೇತಕೆ ಬಂದಳೋಯೆಂದ ||೫

ನೋಡಿದಳು ದಕ್ಷನ ಚರಿತ್ರವ
ಮಾಡಿದಳು ಸ್ಮರಣೆಯ ಮಿಗೆ ಮಾ
ತಾಡಿದಳು ನೀನೆನಗೆ ಪಿತ ನಾ ತನುಜೆ ಮಮತೆಯನು ||
ಮಾಡಬೇಡವೆ ತಂದೆ ನಿನ್ನಯ
ಕೂಡಿದಧ್ವರ ಭಾಗ್ಯವನು ನಾ
ನೋಡಬಂದೆನು ಬೇಡ ಮುಳಿಯದಿರೆಂದಳಾ ದೇವಿ || ೬ ||

ಬಳಕೆಯೇ ನಮ್ಮೊಡನೆ ವಿಪ್ರನ
ಕಳುಹಿದನು ಮೊದಲಲ್ಲಿ ಯೆನಗ
ಗ್ಗಳಿಸಿ ಬಳಕೆಯ ಮಾಡಿ ಬೇಸತ್ತೋಡಿದನು ಮತ್ತೆ ||
ಕಳುಹಿದನು ನಿನ್ನುವನು ನಿನ್ನಯ
ಬಳಕೆಗಾನೊಳಗಾಗಿ ಯಜ್ಞ
ಸ್ಥಳಕೆ ಕರೆಸುವುದಿಲ್ಲ ಹೋಗೆಂದುಲಿದನಾ ದಕ್ಷ || ೭ ||

ಉರುಹಿ ಬಿಡುವೆನು ನಿನ್ನನೆನ್ನಯ
ಪುರುಷನಿಂದೆಯ ಕೇಳಿ ತಾಳುವ
ಪರಿಯದಾವುದು ಮಗಳು ತಂದೆಯ ಕೊಂದಳೆಂಬೊಂದು ||
ಪರಿಕಿಸುವಡಪಕೀರ್ತಿ ಬೇಡೀ
ಗಿರಿಶನಿಂದಕ ನಿನ್ನೊಳುದಿಸಿದ
ದುರಿತ ದೇಹವೆ ಬೇಡೆನುತ್ತುರಿದಡಗಿದಳು ದೇವಿ || ೮ ||

ಸ್ವಾಮಿ ಬಿನ್ನಹ ದಕ್ಷನನು ನಿ
(ರ್ಭೂ)ಮ ಧಾಮನ ಮಾಡಿ ಲೋಕ
ಸ್ತೋಮವನು ಸಲಹುವುದು ನಾನೀ ತೋರಿಕೆಯ ತನವ ||
ಶ್ರೀಮಹಾಚಿದಖಂಡ ತವ ತೇ
ಜೋಮಯದೊಳಡಗಿಸುವೆನೆನುತ ಉ
ಮಾಮಹಿಳೆಯೊಪ್ಪಿದಳು ತೇಜಃಪುಂಜವನು ಶಿವನ || ೯ ||

ಪೂರ್ಣಚೈತನ್ಯಾತ್ಮನೇ ತಾ
ನೆನ್ನ ತೇಜಃಪುಂಜವೇ ಇಂ
ದೆನ್ನ ತೇಜವೆ ಎನ್ನೊಳಿದ್ದುದು ನೋಡುವಂಗೆಂದ ||
ಭಿನ್ನವನೆ ತೋರಿರ್ದಳಿಪ್ಪಿದ
ಳೆನ್ನ ನೀವ್ ಸೋಯದಿರಿ ಪರಶಿವೆ
ಯೆನ್ನ ಬಿಟ್ಟಿರಳೆಂದು ಶಿವ ಸಂತೈಸಿದನು ಸಭೆಯ || ೧೦ ||

(ಹದಿನಾಲ್ಕನೆಯ ಸಂಧಿ ಮುಗಿದುದು)

## ಹದಿನೈದನೆಯ ಸಂಧಿ

ಸೂಚನೆ॥ ಪುಂಡರೀಕಾ (ಕ್ಷಾ)ಧ್ವರನು ಬೆಂ
ಕೊಂಡು ದಕ್ಷನ ತಲೆಯನಂದು
ದ್ದಂಡ ವಿಶೇಶ್ವರನು ಕಲಕಿದನದ್ಭುತಾಧ್ವರವ ॥

ಮೃಡಗೆ ಬಿನ್ನಹ ಮಾಡಿದುದು ಸಭೆ
ಯಡಗುತೆಂದಳು ದೇವ ದಕ್ಷನ
ಕಡಿದು ಪೂರ್ಣಾಹುತಿಯನಗ್ನಿಗೆ ಕೊಡುವುದೆಂದದನು ॥
ನಡೆಸಬೇಕಲ್ಲದಡೆ ಜಗವಿದು
ಕೆಡುವುದೀಶ ದ್ರೋಹದಿಂದೆನೆ
ಮೃಡನ ಭಾಳಾಂಬಕದಿ ವೀರೇಶ್ವರನು ಹೊರವಂಟ ॥ ೧ ॥

ರುದ್ರನಿಚ್ಛೆಯೊಳೊಗೆದಳಾ ಕ್ಷಣ
ಭದ್ರಕಾಳಿ ಕರಾಳಿ ವರ (ಸಾ)
(ರೋ)ದ್ಧತಾಂಸಿ ನಿಜಾಂಗರೋಮಗಳಿಂದ ತನ್ನಂತೆ ॥
ಭದ್ರಕಾಳಿಯು ರೊಗೆದರಗಣಿತ
ರಧ್ವರವನೊಬ್ಬೊಬ್ಬರರುಹುವ
ರೌದ್ರಮೂರ್ತಿಗಳಿದ್ದರಾ ವೀರೇಶ ವಾಮದಲಿ ॥ ೨ ॥

ಕೊಂಡು ಬರಲೋ ಹಿಂಡು ಹಿಂಡಿನ
ಜಾಂಡಗಳನಿನ್ನುಳಿದ ಮಾತಿನ
ಚಂಡಿತನವೇಕೆಂದು ಬಿನ್ನೈಸಿದರೆ ನಸುನಗುತ ॥
ಭಂಡ ದಕ್ಷನ ತಲೆಯ ಹೊಡೆದು
ದ್ದಂಡ ಯಜ್ಞವ ಕಲಕಿ ನೆರದರ
ತಂಡವನು ನೀ ಭಂಗಿಸೂ ಯಿರದಿಲ್ಲಿ ಹೋಗೆಂದ ॥ ೩ ॥

ಬೊಬ್ಬೆಯಬ್ಬರ ವಾದ್ಯದುದ್ಧನ
ಕೊಬ್ಬಿ ಗವಿಸುವ ವೀರನಬ್ಬರ
ಸರ್ಬ ಶಸ್ತ್ರಾಸ್ತ್ರಂಗಳಬ್ಬರ ಘೋರ ಹುಂಕಾರ ॥
ಗಬ್ಬರಿಸಿದಬುಜೋದ್ಭವಾಂಡದ
ಗರ್ಭವನು ಯಾಜ್ಞಿಕರು ಸಟೆಯಲಿ
ತಬ್ಬಿಗೊಳುತಿರ್ದತ್ತ ಹಾವನೆ ಹಾರಿತಡಿಗಡಿಗೆ ॥ ೪ ॥

ಓಡಿದರು ಧವಳಗಳ ಹಾಡುವ
ಗಾಡಿಗಾತಿಯರಮರವಧುಗಳು
ಕೂಡೆಪರಿಚಾರಕರು ವಾದ್ಯಗಳೊಡನೆ ಪಾಹಕರು ॥
ಖೇಡರಾಗಲು ಮತ್ತೆ ಧೈರ್ಯವ
ಮಾಡಿ ನುಡಿದನು ದಕ್ಷನೇ ಕೆ
ಟ್ಟಾಡುವಿರಿ ನಾನಿಹೆನೆನುತ ನಿಲಿಸಿದನು ಕೆಲಕೆಲರ ॥ ೫ ॥

ಚಂಡ ವೀರೇಶ್ವರನ ಚರಣದ
ಹಿಂಡು ರೋಮುಗಳಿಂದಲೊಗೆದು
ದ್ದಂಡ ರೋಮಗರಳಿ ಕವಿದುದು ಹರಿಗಣಾವಳಿಯ ॥
ದಿಂಡುಗೆಡಹಿದು ಕೊರಳು ಕೈಕಾ
ಲ್ತುಂಡಿಸಲು ನೊರೆಯಿಡುತಲೋಡಿತು
ಕಂಡು ಕೋಪದಿ ಶಾರ್ಙ್ಗವನು ಜೇವಡದನಸುರಾರಿ ॥ ೬ ॥

ಗಿರಿಶನಂದುಂಗುಷ್ಟದ ಗ್ರದಿ
ಬರೆಯೆ ಪುಟ್ಟಿತು ಚಕ್ರವದನೀ
ಧುರದೊಳದ್ದಿರೆ ಮುನಿಯಲಾಪುದೆ ಶಿವನ ಮಕ್ಕಳಿಗೆ ॥
ದುರುಳನಾದ್ಯೆ ವಿಷ್ಣು ಪರಮೇ
ಶ್ವರ ಮಹಾದ್ರೋಹಿಗೆ ಜನಾರ್ದನ
ನೆರವಹರೆ ನೀನೆನುತ ವೀರೇಶ್ವರನು ಮೂಗಾಂತ ॥ ೭ ॥

ಕಂಡನಚ್ಯುತನೀತನೊಳು ಕೈ
ಕೊಂಡು ನಿಂದರೆ ಹಾನಿಯೆನುತಾ
ಚಂಡವೇಷದಿ ಕೃಷ್ಣಮೃಗರೂಪಾಗಿ ಸರಿವುತಿರೆ ॥
ಖಂಡಪರಶುಕುಮಾರರಭಯೋ
ದ್ದಂಡ ಶರದಿಂದೆಸವು ಥಟ್ಟಿಗಿ
ದಂದದಲಿ ತಾ ಮುರಿದು ನಿಂದುದು ಗಮನವಾ ಹರಿಯ॥೮॥

ನರಹರಿಯು ಚರ್ಮವನು ನೀನಾ
ಶರಭರೂಪದಿ ಸೀಳ್ದಿಮಿಗೆ ಕ
ತ್ತರಿಸಿ ಮುಖವನು ಪರಶಿವಂಗರ್ಪಿಸಿದ ಕಥನದೊಳು ॥

ಹರಿಣನಾಗಿರ್ದೆನ್ನ ಚರ್ಮವ
ಗಿರಿಶರ್ಗರ್ಪಿಸು ನಾನು ದಕ್ಷಗೆ
ಶಿರವನಿತ್ತಪೆನೆಂಬ ಭಾಷೆಗೆ ಉತ್ತರಹುದೆಂದ ॥ ೯ ॥

ದೇಹವಿಲ್ಲದದೇವಿ ಬಿಟ್ಟಳು
ದೇಹವನು ಪತಿನಿಂದೆಗೇಳಿದ
ಮೋಹಕವು ವ್ಯಾಜದಲಿ ಬಿಟ್ಟಡೆ ದೇವಿಗದು ತಾನು ॥
ದೇಹವೇ ಕೆಡದಿಪ್ಪ ತೇಜೋ
ವ್ಯೂಹವೇ ಶಿವೆಯದರವೊಲು ನಿ
ರ್ಮೋಹ ನೀನೆಂದಪ್ಪಿ ಮನ್ನಿಸಿ ಕಳುಹಿದನು ಹರಿಯ॥೧೦॥

ಭೂಸುರರ ಹೊರವಡಿಸಿ ಭರದಿಂ
ಬೀಸಿಬಿಟ್ಟನು ವಾಯು ಪರಮಾ
ಭಾಸ ದಕ್ಷನ ಕಂಡು ತಲೆಯನು ಹೊಡೆದ ಕಡುಹಿಂದ ॥
ಧೂಸರಾಧ್ವರದಲ್ಲಿ ಘನತರ
ರೋಷಪೂರ್ಣಾಹುತಿಯನಾ ವೀ
ರೇಶನಿತ್ತನು ಮುನಿದುದತ್ಯದ್ಭುತ ಮಹಾಯಜ್ಞ ॥ ೧೧ ॥

ಮಡಿದನೆನ್ನಯ ಮಾತಕೇಳದೆ
ಮೃಡವಿರೋಧದೊಳಕಟನುತ ಮನ
ಹೊಡಕಿ ಬಂದನು ಬೇಗದೊಳು ವೀರೇಶನಂಘ್ರಿಯೊಳು ॥
ಕೆಡದು ರಕ್ಷಿಸು ದುಷ್ಟ ದಕ್ಷನ
ಕಡುಹಿನಪರಾಧವನು ಸೈರಿಸು
ಮೃಡ ಎನುತ ಪರಮೇಷ್ಠಿ ಮಾಡಿದನಗಣಿತಸ್ತುತಿಯ॥೧೨॥

ಎತ್ತಿದನು ಪರಮೇಷ್ಠಿಯನು ನಿಜ
ಪುತ್ರನಲ್ಲಾ ದಕ್ಷನಧ್ವರ
ಕೃತ್ಯದಲಿ ಹೊರವಂಟು ಹೋದೆಯಲಾ ಸದಾಶಿವನ ॥
ಭಕ್ತ ನೀನಹೆಸೈರಿಸುವೆನಪ
ಕೃತ್ಯವನು ನಾನೆಂದು ಮುಂಡಕೆ
ಹತ್ತಿಸಿದನಾ ಕುರಿಯ ತಲೆಯನು ನೆಗಹಿ ಕರುಣದಲಿ ॥೧೩॥

ತಂದೆ ನಿಮ್ಮ ನಿರೂಪವನು ಯೋ
ಗೀಂದ್ರನಾದ ದಧೀಚಿ ವಚನವ
ನಿಂದು ಕೇಳದೆ ಕೆಟ್ಟೆನೆನ್ನಪರಾಧವನು ಮರೆದು ॥

ಮುಂದೆಯೊಬ್ಬಗೆ ಪಟ್ಟಗಟ್ಟಿನ ।
ಗಿಂದು ಶಿವನೊಲಿವಂತೆ ಮಾಡೆನು ।
ತಂದು ಬೊಮ್ಮನ ಪದವ ಹಿಡಿಪನು ದಕ್ಷ ಗೋಳಿಡುತ ॥ ೧೪ ॥

ತುಳುಕಿದವು ಕಂಬನಿಗಳೆತ್ತಿದ ।
ನೊಲಿದು ವೀರೇಶ್ವರಗೆ ವಿಧಿ ಕೈ ।
ಗಳನು ಮುಗಿದನು ದಕ್ಷಗೀಯಧಿಕಾರವಿದು ಬೇಡ ॥
ಕಳೆದು ನಿಮ್ಮ ದ್ರೋಹವನು ನಿ ।
ನ್ನೊಳಗೆ ಬೆರಸುವ ತೆರದಿ ಕಾಶಿಗೆ ।
ಕಳುಹೆನಲು ಬೀಳ್ಕೊಟ್ಟನಾ ವಿರೇಶ ಕರುಣದಲಿ ॥ ೧೫ ॥

ಎತ್ತಿದನು ವೀರಾಧಿವೀರನ ।
ಮಸ್ತಕವನೀ ತೆರದಿ ದುಷ್ಟರ ।
ನೊತ್ತವನು ಸಂಹರಿಸುತಸ್ಮದ್ದ್ರೋಹಿಗಳ ಸವರಿ ॥
ಭಕ್ತರಿಷ್ಟವನಿತ್ತು ಗಾಣಾ ।
ಪತ್ಯ ಭೋಗವ ಭೋಗಿಸೈ ಎಲೆ !
ಪುತ್ರ ಎಂದನು ಭದ್ರಕಾಳೀಶ್ವರಗೆ ವಿಶ್ವಪತಿ ॥ ೧೬ ॥

ಕಾಶಿಯೊಳು ಶಿವಲಿಂಗವನು ದ ।
ಕ್ಷೇಶನೆಂದೇ ನೆಲಸಿ ನಿರ್ಮಲ ।
ಪಾಶುಪತ ಸುವ್ರತವ ನೊಲವಿಂ ಧರಿಸಿ ಬಹುಕಾಲ ॥
ಈಶಪೂಜೆಯ ಮಾಡಿ ದ್ರೋಹ ವಿ ।
ನಾಶವಾಗಲು ಶಿವನ ಕೃಪೆಯಿಂ ।
ದಾಶಿವನ ಜ್ಞಾನದಲಿ ದಕ್ಷನು ಲಿಂಗದೊಳಗಾದ ॥ ೧೭ ॥

(ಹದಿನೈದನೆಯ ಸಂಧಿ ಮುಗಿದುದು)



## (ಹದಿನಾರನೆಯ ಸಂಧಿ)

ಸೂಚನೆ ॥ ಸೂತನಷ್ಟಾದಶ ಪುರಾಣ ।
ವ್ರಾತವನು ತದ್ದಾನ ಫಲವನು ।
ನೀತಿಯನು ತಿಳುಹಿದನು ಸರ್ವಜನಕ್ಕೆ ಶುಭಕರವ ॥

ಬ್ರಾಹ್ಮ ಪಾದ್ಮಕ ವಿಷ್ಣು ಶಿವ ಗುಹ ।
ಶರ್ವ ಭಾಗವತಂ ಭವಿಷ್ಯರು ।
ಕ ಮೃಕಂಡುಜ ಪಾವಕಾಪ್ವಯ ನಾರದೀಯಗಳು ॥
ಬ್ರಹ್ಮ ವೈವರ್ತಾಖ್ಯ ಲೈಂಗ್ಯ ಮ ।
ನರ್ಮಹಾ ವಾರಾಹ ಪಾಮನ ।
ಕೂರ್ಮ ಮತ್ಸ್ಯಗರುತ್ಮ ಬ್ರಹ್ಮಾಂಡಗಳು ಪದಿನೆಂಟು ॥ ೧ ॥

ಜ್ಞಾನಕೊಡುವ ಮಹಾಪುರಾಣ ವಿ ।
ತಾನವಿವು ಹದಿನೆಂಟು ಖಿಲ ಪೌ ।
ರಾಣಗಳು ಹದಿನೆಂಟು ಇದಕೆ ಸಹಾಯವಾಗಿಹವು ॥
ದಾನಗಳಿಗರ್ಥಂಗಳಿಲ್ಲದ ।
ಮಾನವರು ಬರೆದಿದರೊಳೊಂದನೆ ।
ದಾನವಿತ್ತಡೆ ಸರ್ವದಾನದ ಫಲಗಳಹುವೆಂದ ॥ ೨ ॥

ಇನ್ನುಳಿದ ದಾನಗಳ ಪೇಳುವೆ ।
ನನ್ನ ಜಲ ವಸ್ತ್ರೌಷಧಂಗಳ ।
ನಿನ್ನು ಪಾತ್ರಾಪಾತ್ರವೆನ್ನದೆ ಕೊಡಲು ಬೇಕದನು ॥
ಧಾನ್ಯ ಧನ ಗೋ ಭೂಮಿ ಮಂತ್ರ ಸು ।
ವರ್ಣ ಮಣಿ ಕನ್ಯಾಲಯಕೆ ತಾ ।
ಮುನ್ನ ಪಾತ್ರಾಪಾತ್ರವೆಂಬ ವಿಚಾರ ಬೇಕೆಂದ ॥ ೩ ॥

ಭೂಸುರೋತ್ತಮ ಗೀವುದಗ್ಗದ ।
ಭೂಸುರೋತ್ತಮನಾಗಿಯಲ್ಲಿ ಸ ।
ದಾಶಿವನ ನಿಜ ಭಕ್ತನಾದಡದೇನ ಹೇಳುವೆನು ॥
ಕಾಸವಿತ್ತಡನಂತವದರೊಳು ।
ಭೂಸುರೋತ್ತಮನಾದ ಭಕ್ತನೆ ।
ಈಶಭಕ್ತನು ಮಿಕ್ಕವರು ದಾನಕ್ಕಯೋಗ್ಯರಲಾ ! ॥ ೪ ॥

ಶ್ರಾದ್ಧಮುಖ್ಯವ್ರತಗಳಲಿ ವರ |
ಶುದ್ಧಪಾತ್ರವನರಸಬೇಹುದು |
ಶುದ್ಧವಾಗಲಶುದ್ಧವಾಗಲಿ ಹಸಿದು ಬಂದವಗೆ ||
ಶೂದ್ರನಾಗಲಿ ಹೊಲೆಯನಾಗಲಿ |
ಮುಗ್ಧಕುಂಟರು ಕುರುಡರಾಗಲಿ |
ಯರ್ಧರಾತ್ರಿಯೊಳಾದರನ್ನವನೀಯ ಬೇಕೆಂದ || ೫ ||

ಕೇಳಿದಕೆ ಕಥೆಯೊಂದನಾ ಚಾಂ |
ಡಾಲನೊಬ್ಬನು ಕುಟಜನೆಂಬನು |
ಗಾಳಿ ಮಳೆ ಕತ್ತಲೆಯೊಳಳಲುತ ಕಾಷ್ಠಭಾರವನು ||
ತಾಳಿ ಮಾರದೆ ಹಸಿದು ನೆನೆದು ವಿ |
ಟಾಲ ದುಃಖದಿನರ್ಕನೆಂಬ ವಿ |
ಶಾಲ ವಿಪ್ರನ ಮನೆಗೆ ತಂದಿಳುಹಿದನು ರಾತ್ರೆಯಲಿ || ೬ ||

ದೀವಿಗೆಯ ತಾಯೆನಲು ಬೇಗದಿ |
ಭಾವೆ ತಂದಳು ನೋಡಿ ಬಳಲಿದ |
ಜೀವಿಗಗ್ನಿಯ ನೊಟ್ಟಯೊದ್ದೆಯ ತೆಗೆಸಿ ಮಗುಳೊಂದ ||
ಭೂದಿವಿಜನಾಂತನ್ನವಿತ್ತು ಸು |
ಭಾವದಲಿ ಸಂತುಟ್ಟಬಡಿಸಿ ವಿ |
ಭಾವಸುವಿನುದಯದಲಿ ಕಳುಹಿದನವನನಾ ವಿಪ್ರ || ೭ ||

ಆತನಂಗನೆಗೊಂದು ಹಿಡಿದುದು |
ಭೂತ ಕಾಲಾಂತರದೊಳದಕೆ ಮ |
ಹಾತಿಶಯ ಮಂತ್ರಜ್ಞರಿಂ ಬಹುಕೃತ್ಯವನು ಮಾಡೆ ||
ಮಾತನಾಡಿದುದಂದು ಹೊಲೆಯಂ |
ಗೋತು ಕೊಟ್ಟನ್ನದ ಮಹಾ ವಿ |
ಖ್ಯಾತ ಫಲವನು ಕೊಡಲು ಹಿಂಗುವೆನೆಂದುದಾ ಭೂತ || ೮ ||

ಕೊಟ್ಟನಾಗಲೆ ವಿಪ್ರನಬಲೆಯ |
ಬಿಟ್ಟುದಾಗಲೆ ಭೂತವಾ ಫಲ |
ಬೆಟ್ಟವಾಗಿರೆ ಭೂತಜನ್ಮವ ನೀಗಿ ಪುಷ್ಪಕದಿ ||
ನೆಟ್ಟನಾ ಸ್ವರ್ಗಕ್ಕೆ ಗಮಿಸಿತು |
ಶ್ರೇಷ್ಠವಲ್ಲಾ ಬಳಲಿ ಬಂದನ |
ತುಟ್ಟಿ ಬಡಿಸುವುದದಕೆ ಸರಿಯಹ ದಾನವಿಲ್ಲೆಂದ || ೯ ||

ಶೂರನೆಂಬುವನೊಬ್ಬ ಶೂದ್ರಕು |
ಮಾರಕನು ಪಂಪಾಪುರದೊಳಿ |
ರ್ದಾರು ಬರಲನ್ನವನು ಕೊಡುವನು ಸರ್ವಕಾಲದಲಿ ||
ತೀರಿದುದು ಧನವೆಲ್ಲ ಭೂಮಿಯ |
ಮಾರಿಯನ್ನವನಿತ್ತು ಮತ್ತದು |
ತೀರಿದಡೆ ಮಾರಿದನು ಭೂಷಣವಸ್ತ್ರತತಿಗಳನು || ೧೦ ||

ಬಂದ ಬಂದವರಿಂಗೆ ಪರಮಾ |
ನಂದದಿಂದನ್ನವನು ಕೊಡುತಿರ |
ಲೊಂದು ದಿನ ಧಾನ್ಯಂಗಳೆಲ್ಲವು ತೀರಿ ಮನೆಯೊಳಗೆ ||
ತಂದೆ ಮಕ್ಕಳು ಕಾಂತೆ ಸಹ ಹಸಿ |
ದೊಂದೆರಡು ದಿನವಾಗಲಾ ದಿನ |
ಬಂದನಾ ರಾತ್ರಿಯಲಿ ಮಳೆಯಲಿ ನೆನದು ಶಿವಶರಣ || ೧೧ ||

ಮೂರು ನೆರೆಮನೆಗೆನ್ನ ತತ್ಪರಿ |
ಚಾರಕಿಯು ತಾನಾಗಿ ತಿದ್ದುವೆ |
ನಾರೆನೆನ್ನದೆ ಹೋಗಿಯೆನಲಾ ಶೂರನೊಡಬಡಿಸಿ |
ಓರೆಯಕ್ಕಿಯ ತರಲು ಥಳಿಸಿದ |
ಳಾ ರಮಣಿ ಶುದ್ಧೋದಕದಿ ಕೈ |
ಯಾರೆ ಶಾಕ ಸಮೇತವಾದರದಿಂದ ರಚಿಸಿದಳು || ೧೨ ||

ಸವೆದಳನ್ನವನಬಳೆ ಮಾಡಿದ |
ಳವಗೆಡೆಯನಂದರ್ಭಕನು ಕಾ |
ಲವನು ಮಾಡಲು ಹೇಳದಂಗನೆ ಬಡಿಸಿದಡೆ ಕಂಡು ||
ಯುವತಿ ಪುರುಷರ ಪರಮಧೈರ್ಯಕೆ |
ಶಿವನು ಮೈದೋರಿದನು ಪದವಿಯ |
ನವರಿಗಿತ್ತನು ದಾನಮಹಿಮೆಯನರಿವರಾರೆಂದ || ೧೩ ||

ಕುರುಧರಣಿಯೊಳಗೊಬ್ಬ ಭೂಮಿಾ |
ಸುರ ಸುಧರ್ಶನ ಮತ್ಸ್ಯವೃತ್ತಿಯ ;
ನಿರುತ ಬಂದತಿಥಿಗಳಿಗನ್ನವನೀವುತಿರೆ ಕಂಡು ||
ಪರಮಮುನಿ ದೂರ್ವಾಸನೈತರೆ |
ಹರುಷದಿಂದಾತಿಥ್ಯವನು ವಿ |
ಸ್ತರಿಸಿ ಸವೆದನ್ನವನು ಬಡಿಸಿದನಾ ಮುನೀಶ್ವರಗೆ || ೧೪ ||

ಆಗಲಾ ಸ್ತ್ರೀಪುರುಷ ಸೊಸೆಯರ ।
ರಾಗ ಕುಂದಿತು ಪಕ್ಷ ಮೂರರ ।
ಬೇಗೆಯುಪವಾಸದಲಿ ಬಳಲುವ ದೇಹದುಬ್ಬಸವ ॥
ಆ ಗರುವಗೊಂದಿಸಿತು ತೋರದೆ ।
ಮೇಗೆ ಧರ್ಮದ ಬಲುಹ ನಂಬಿದ ।
ಭಾಗಧೇಯರ ಕಂಡು ಮೈದೋರಿದನು **ದೂರ್ವಾಸ** ॥ ೧೫ ॥

ಹರಿಯು ವೈಕುಂಠದಲಿ ಸುಖವಿರು ।
ಧರಣಿಯಮರ ಎನಲ್ಕೆ ಜಯವಿಜ ।
ಯರಿಗೆ ಭೋಗಚ್ಯುತಿಗಳಾದುವು ಪಾಶುಪತ ಶರದಿ ॥
ಉರಿದ ವೈಕುಂಠವದನಿನ್ನೆನ ।
ಗೊರೆಯದಿರು ಮುನಿನಾಥ ಎನೆ ಪುರ ।
ಹರನಿರುವ ಕೈಲಾಸವಾಗಲಿ ಯೆಂದಡಿಂತೆಂದ ॥ ೧೬ ॥

ಅದು ಮಹೋನ್ನತ ಭೋಗವತ್ಯ ।
ಭ್ಯುದಯವನು ಕೇಡಿಲ್ಲವಾದೊಡೆ ।
ಅದಕೆ ದೇಹವ ಧರಿಸಿ ಭೋಗಿಸಬೇಕಲಾ ಸುಖವ ॥
ಅದಕೆ ನಾನಿನ್ನಾರೆ ನಿಮ್ಮಯ ।
ಪದದೊಳಡಗುವ ಸಿರಿಯ ಕರುಣಾ ।
ಸ್ಪದನೆ ಕರುಣಿಪುದೆನಲು ಮುಕ್ತಿಯನಿತ್ತನಾತಂಗೆ ॥ ೧೭ ॥

ಫಲವ ಬಯಸದ ದಾನವೆಂದೀ ।
ಫಲಿತ ನಿತ್ಯವೆನಿಕ್ಕು ಪಾಪವ ।
ತೊಲಗಿಸುವ ದಾನಗಳು ನೈಮಿತ್ತಿಕವದೊಂದೊಂದು ॥
ಫಲವ ಕುರಿತಡೆ ಕಾಮ್ಯವೆನಿಸುವು ।
ದಲಸದೀಶ ಪ್ರೀತಿಯಿಂದೇ ।
**ತಿಳಿದು ಮಾಡಲು ವಿಮಲವಿಂತೀ ನಾಲ್ಕು ತೆರನೆಂದ** ॥ ೧೮ ॥

(ಹದಿನೇಳನೆಯ ಸಂಧಿ)

ಸೂಚನೆ॥ ಕಂದ ಬಿನ್ನವಿಸಿದಡೆ ಕರುಣದಿ ।
ಇಂದು ಶೇಖರ ಭಕ್ತಿಯೋಗವ ।
ನಂದದಿಂದೊರೆದರ್ಥವನು ರವಿ ಪೇಳಿದನು ಸುತಗೆ ॥

ಕಂದ ಕೇಳೈ ಮಿಕ್ಕ ದೇವರ ।
ಚೆಂದದಿಂ ಪೂಜಿಸುವ ಭಕುತರ ।
ವೃಂದದಿಂ ಶಿವ ವಹ್ನಿ ಭಾಸ್ಕರ ಭಕ್ತರಧಿಕರಲಾ ॥
ಇಂದಿರಾಧವಭಕ್ತರೇ ಅವ
ರಿಂದ ನೂರ್ಮಡಿ ವಿಷ್ಣುಭಕ್ತರ
ವೃಂದಕೋಟಿಗೆ ಯೆನ್ನ ಭಕ್ತರೆ ಅಧಿಕರವರೆಂದ ॥ ೧ ॥

ಪಶುಗಳೊಳಗಾ ಕ್ಷೀರವೆಲ್ಲಾ ।
ಯೆಸಕದೊಳು ಸಂತುಷ್ಟಿ ಜೀವ ।
ಪ್ರಸರದೊಳಗಖಿಳೈಕ ಸ್ವಾದಾಪ್ಯಾಯನವದೊಂದೆ ॥
ಎಸೆವೊಲೆಲ್ಲರೊಳಿರ್ದು ಪೂರ್ಣನೆ ।
ಒಸೆದು ಪೀಠದ ಲಿಂಗವಾಗ ।
ರ್ಚಿಸಿಕೊಳ್ಳುತ್ತಿಹನೆಂದು ತಿಳಿದನೆ ಭಕ್ತನವನೆಂದ ॥ ೨ ॥

ನೀರು ಮಣ್ಣಿಂದಾದ ಕೆಸರನು ।
ನೀರುಮಣ್ಣಿಂ ತೊಳೆಯೆ ಕೆಸರುಂ ।
ನೀರೆರಡು ಬಯಲಾಗಿ ತಾನುಳಿವಂತೆ ಮಿಥ್ಯೆಯಲಿ ॥
ತೋರಿದೀ ವಿಶ್ವವನು ಮಿಥ್ಯಾ ।
ಕಾರ ಗುರುವಿನ ಬೋಧೆಯಿಂಬಳಿ ।
ದಾರು ನಿಲುವರವರ್ಗಳೆನ್ನಯ ಭಕ್ತರಹರೆಂದ ॥ ೩ ॥

ಔಷಧವಸೇಂಟಿದರೆ ರೋಗದ ।
ದೋಷವನು ಪರಿಹರಿಸಿ ಮತ್ತಾ ।
ಔಷಧವ್ಯಾಧಿಗಳು ತಮ್ಮೊಳು ತಾವೆ ಹರವಂತೆ ॥
ಈ ಶರೀರಾದ್ಯಖಿಲ ಜಗದಭಿ ।
ಲಾಷೆಯನು ಶ್ರುತಿಯಳಿದರಾ ಶ್ರುತಿ ।
ಯೀ ಶರೀರಗಳಳ್ಳಿರಿದು ತಾನೊಬ್ಬನಿಹನೆಂದ ॥ ೪ ॥

ಬಾಲಕರು ಕೇಳಿಯಲಿ ಮಣ್ಣಲಿ ।
ಧೂಳಿಯಲಿ ಗೊನೆಗಲ್ಲಳಲಿ ಡೇ ।
ವಾಲಯಂಗಳ ಮಾಡಿಯುದರಿಂ ಪೂಜಿಸುತ್ತವರು ॥
ಮೇಲೆ ಕುಣಿವುತ ದೇಹ ಮಮತೆಯ ।
ಜಾಳಿಸಲು ಮೆಚ್ಚುವೆನು ಗೊಲ್ಲರ ।
ಬಾಲಕನ ಸದ್ಭಕ್ತಿಯೆನ್ನನು ಮೆಚ್ಚಿಸದೆಯೆಂದ ॥ ೫ ॥

ಕ್ರೂರಬುದ್ಧಿಯೊಳುಗ್ರ ತಪದಿಂ ।
ದಾರು ಮೆಚ್ಚಿಸಲವರಿಗಿತ್ತದು ।
ಸಾರವಲ್ಲ ದುರಾತ್ಮರಿಗೆ ಭೂಮಿಯಲಿ ತುರುಜೆಯನು ||
ಆರು ಬಿತ್ತಲು ಫಲವನೀವಂ ।
ತಾರು ಬೇಡಿತನೀವೆ ಬೇಳ್ಪ ವಿ ।
ಚಾರಿಗಳು ತಾವೇ ವಿಚಾರಿಸಿ ಬೇಡಬೇಕೆಂದ ॥ ೬ ॥

ಶರಧಿಯೊಳು ಮೀನಂಗಳೆತ್ತಲು ।
ಶರವನೇ ಕಾಣ್ಬಂತೆ ಸಚರಾ ।
ಚರಮಯ ಬ್ರಹ್ಮಾಂಡದೊಳು ಪರಶಿವನನೇ ಕಂಡು ॥
ಪರರು ತನ್ನವರೆಂಬ ಭೇದವ ।
ನೊರಸಿ ಹರಹರ ಎನುತ ಕುಣಿವು ।
ತ್ತಿರಲು ನಂಬಿದುದಕ್ಕೆ ಕುರುಹಿದು ಭಕ್ತಿಕೇಳೆಂದ ॥ ೭ ॥

ಮೊದಲು ಸಗುಣಾಷ್ಟಾಂಗಯೋಗದ ।
ವಿಧಿಯನಭ್ಯಾಸಿಸುವುದದು ಬಲಿ ।
ದೊದಗಿದಲ್ಲದೆ ನಿರ್ಗುಣಾಷ್ಟಾಂಗ ಪ್ರಸಂಗವನು ॥
ವಧಿಸಬಾರದು ಕಲಿಯುಗದೊಳಾ ।
ಮೊದಲ ಬಿಟ್ಟಗ್ರವನೆ ಹಿಡಿವರು ।
ಮೊದಲ ಧೂಳಕ್ಷರವ ಬಿಟ್ಟೋಲೆಗಳ ಬರೆವಂತೆ ॥ ೮ ॥

ಯೋಗಸಿದ್ಧಿಗೆ ವಿಘ್ನ ಮೂರುಂ ।
ಟಾಗಿ ಸತ್ವರಜಸ್ತಮೋಮಯ ।
ವಾಗಿಹುದು ದೇಹಾಭಿಮಾನಿಗೆ ದೇಹದಭಿಮಾನ ॥
ನೀಗಲರಿಯದು ಬಿಡಲದರಿಯದು ।
ನೀಗಿದಲ್ಲದೆ ಸಿದ್ಧಿಯಿಲ್ಲದ ।
ಸೀಗುವಡೆ ತದ್ಧ್ಯಾನಪಂಚಾಭ್ಯಾಸ ಬೇಕೆಂದ ॥ ೯ ॥

(ಹದಿನೆಂಟನೆಯ ಸಂಧಿ)

ಸೂಚನೆ॥ ಹೇಳಿದನು ನಾನಾಶ್ರಮಂಗಳ ।
ಕಾಲದೇಶ ವಿಭಾಗವನು ರವಿ ।
ಭಾಳಲೋಚನ ಪುತ್ರನವತಾರವನು ಮುನಿಗಳಿಗೆ ॥

ಧರಣಿಯುಮರರು ಕ್ಷತ್ರಿವಿಟ್ ಶೂ।
ದ್ರರುಗಳೆಂಬೀ ನಾಲ್ಕುಕುಲ ಸಂ ।
ಕರದಿ ನೂರೊಂದಾಯ್ತು ಜಾರೆಯರಿಂದ ಲೋಕದಲಿ ॥
ತರುಣಿ ಮೂಲವೆ ಸಿದ್ಧ ದುಷ್ಟಾ ।
ಚರಣದಿಂ ನರಕವನೆ ತುಂಬಿಸು ।
ತರಸುತನವಿವರಿಂದ ಸರಿದುದು ಕಲಿನೃಪಾಲಂಗೆ ॥ ೧ ॥

ಆರು ಭೂಸುರರಾಗಿ ಧರ್ಮಾ ।
ಚಾರ ಬೇಕೆಂಬುವರು ಯಮುನಾ ।
ತೀರ ಗಂಗಾತೀರ ಮಧ್ಯದ ಭೂಸುರರ ನೋಡಿ ॥
ಸಾರಧರ್ಮವ ಕಲಿತು ನಡೆವುದು ।
ಧಾರುಣಿಯೊಳಿನ್ನುಳಿದ ದೇಶಾ ।
ಚಾರದಲಿ ಶಾಸ್ತ್ರದಲಿ ಪಲ್ಲಟವುಂಟು ಕೇಳೆಂದ ॥ ೨ ॥

ಪಂಕಜಾಕ್ಷನ ಭಕ್ತನಹ ಹಂ ।
ಸಾಖ್ಯನವನ ಪುರೋಹಿತರ್ಕಳು ।
ಶಂಖ ಲಿಖಿತರೆನಿಪ್ಪ ಸೋದರರಿದ್ದು ತಮ್ಮಂಗೆ ।
ತಾಂ ಕರೆದು ಭಾಗವನು ಕೊಟ್ಟಡ ।
ಸಂಖ್ಯೆಯಿಂ ಬೇರೂರೊಳಿರುತಿರು ।
ತಂಕೆಯಿಂದಣ್ಣನನು ಕಾಣ್ಬಡೆ ಬಂದನೊಂದು ದಿನ ॥ ೩ ॥

ಅಣ್ಣನಿಲ್ಲತ್ತಿಗೆಗೆ ಸಲ್ವುದೆ ।
ಯನ್ನ ಜಲವೀವುದಕೆನಗೆ ಮ ।
ಧ್ಯಾಹ್ನ ಮೀರಿದುದೆನುತ ಹಿತ್ತಿಲ ಕೊಳನೊಳಗೆ ಮಿಂದು ॥
ತನ್ನ ಕರ್ಮವ ತಿದ್ದಿ ಬಾಳೆಯ ।
ಹಣ್ಣು ಕಳಿತಿರೆ ದೇವಗರ್ಪಿಸಿ ।
ಹಣ್ಣು ಭಕ್ಷಿಸಿ ಬಾಗಿಲಲಿ ಕುಳ್ಳಿರ್ದನಾ ವಿಪ್ರ ॥ ೪ ॥

ಹರಚಿತವ ನೀನರಿಯದವನೇ ।
ಪರಿಕಿಸೈ ನೀನುಸುರ್ದ ಶಾಸ್ತ್ರವ ।
ಕಿರಿಯನಾದಡದೇನೆಲಾ ಸರ್ವಜ್ಞನೆಂದೆನಲು ॥
ಸ್ಮರಿಸಿದನು ಶಾಸ್ತ್ರವನು ಭೂಪನ ।
ಹೊರೆಗೆಯಗ್ರಜ ಸಹಿತ ಬಂದೀ ।
ಕರವ ಕತ್ತರಿಸೆಂದರೆಂದನು ನೃಪತಿಯಾ ದ್ವಿಜಗೆ ॥ ೫ ॥

ಆಹುದು ಪರಧನವಿವಗೆ ಸಲ್ಲದು ।
ಮಹಿಯೊಳಣ್ಣನ ಧನವದೆಂದೇ ।
ಗ್ರಹಿಸಬರದು ವಿಭಕ್ತವಾದರೆ ಬಳಿಕ ಪರರೊಡವೆ ॥
ಮಹಿಯನಾಳ್ವರು ಕೈಯ ಕಡಿವದೆ ।
ಮಹಿಸನಾಹನನಿಂದ ಭಯವಿ ।
ಲ್ಲಹೆ ನೃಪಾಲಕ ಕಡಿವುದಾತನ ವಚನನಂತೆಂದು ॥ ೬ ॥

ಕರ್ಮಗಳನಾಲಸ್ಯವಿಲ್ಲದೆ ।
ಧರ್ಮದಲಿ ನಡೆಸುತ್ತಲಿದೆ ಪಿತೃ ।
ಕರ್ಮದಲಿ ಮೆಚ್ಚಿದರು ಪಿತೃಗಳು ಸಹಿತ ಸುರರೆಲ್ಲ ॥
ಧರ್ಮಶಾಸ್ತ್ರವ ನೀನೆ ಹೇಳಿದೆ ।
ಧರ್ಮ ತಪ್ಪದೆ ನಡೆದು ತೋರಿದೆ ।
ತಮ್ಮ ವರವನು ಬೇಡೆನುತ ನುಡಿಯಾಯ್ತು ಗಗನದಲಿ ॥ ೭ ॥

ಎರಡು ಕೈಯಲಿ ಗೋತ್ರನಾಮೋ ।
ಚ್ಚರಣೆಯಿಂ ವಂದಿಸಿದಡಿಂ ನ್ಯೆ ।
ಬಿರಿಯಲಪ್ಪಿದ ನರಸನೆಡಗೈತಂದರುತ್ಸವದಿ ॥
ಕರಿಯನೇರಿಸಿ ಮೆರೆವ ಧಾತ್ರೀ ।
ಸುರರ ಧರ್ಮಕೆ ನೀನೆ ಗುರಿಯೆಂ ।
ದೆರಗಲವನಿಪನಖಿಳ ಜನ ಹೊಗಳಿದುದು ಧರೆಯೊಳಗೆ ॥ ೮ ॥

ಸೃಷ್ಟಿಕರ್ತ ಬ್ರಹ್ಮನೊಡ್ಡಿದ ।
ತಿಟ್ಟದಲಿ ಕರ್ಮಂಗಳೊಂದನು ॥
ಬಿಟ್ಟಡದು ಪಾತಿತ್ಯ ಮಾಡಿವಡಧಿಕ ಫಲ ಸಿದ್ಧಿ ॥
ನೆಟ್ಟನೀಶಪ್ರೀತಿಯೆಂದೊಡ ।
ಬಟ್ಟು ಮಾಡುವ ಕರ್ಮ ಭಕ್ತಿಯ ।
ಕೊಟ್ಟು ಮುಕ್ತನ ಮಾಡುವುದು ಜಗದೊಳಗೆ ಕೇಳೆಂಪ ॥ ೯ ॥

ಕಳುಹಿದನು ಮಾನಸ. ತನೂಜರ ।
ನೊಲಿದು ತಪವನು ಮತ್ತೆ ಮಾಡುತ ।
ಬಳಲಿ ಕೋಪಾಟೋಪ ಮೂರ್ಛಿತನಾಗಿ ಪುರಹರಗೆ ॥
ಅಳಲಿ ಮೊರೆಯಿಟ್ಟಾರ್ಭಟಿಸಿ ಸಲೆ ॥
ಸುಲಭ ಶಿವನೇ ಪುತ್ರನಹೆನೆಂ ।
ದೊಲಿದು ವರವನು ಕೊಟ್ಟ ಪೂರ್ವದೊಳದನು ತೋರೆಂದ ॥ ೧೦ ॥

ಎನ್ನ ಮತ್ತೀತಕ್ಕೆ ಭಜಿಸಿದೆ ।
ನಿನ್ನಭೀಷ್ಟವದೇನು ಹೇಳೆನೆ ।
ಎನ್ನೊಳಾಗದು ಸೃಷ್ಟಿ ನಿಮ್ಮಯ ಕರುಣವಿಲ್ಲೆನಲು ॥
ಇನ್ನು ಮಾಡೈ ಸೃಷ್ಟಿಯನು ನೀ ।
ನೆನ್ನನುಗ್ರಹ ನೀನು ಮಾಡಿದ ।
ಪೂರ್ಣ ಸೃಷ್ಟಿಯ ನಡೆಸುವೆನು ನೀನಂಜಬೇಡೆಂದ ॥ ೧೧॥

ಎಡದಲಾ ವಿಷ್ಣುವನು ಪಡೆದೆನು ।
ಬಿಡದೆ ರಕ್ಷಿಸಲೆಂದು ವಕ್ಷದಿ ।
ಪಡೆದೆ ನಲವಿಂದಾದಿರುದ್ರನನಾತ ಸಂಹರಿಸಿ ।
ಕೊಡುವನೀಯಂದದಲಿ ನಿಜವನು ।
ನಡೆಸಿ ಮೂವರು ನೀವು ನಿಮಗಾ ।
ನೊಡೆಯನಾಗಿಹೆನಂಜಬೇಡೆಂದಭಯವನು ಕೊಟ್ಟ ॥ ೧೨ ॥

(ಹದಿನೆಂಟನೆಯ ಸಂಧಿ ಮುಗಿದುದು)



# ಕಠಿಣ ಶಬ್ದಗಳ ಅರ್ಥ

ಅಭಿಧಾನ-ಹೆಸರು
ಅರಿವು-ಜ್ಞಾನ, ತಿಳಿವಳಿಕೆ
ಅಮೃತ-ಹಾಲು (ದೇವತೆಗಳ ಆಹಾರ)
ಅಬ್ಧಿ-ಸಾಗರ, ಸಮುದ್ರ
ಅಗಣಿತ-ಲೆಕ್ಕವಿಲ್ಲದ
ಅತುಲ-ಸಮವಿಲ್ಲದ, ಹೆಚ್ಚಾದ
ಅಜಾಂಡ-ಪ್ರಪಂಚ, ಲೋಕ
ಅರ್ಕ-ಸೂರ್ಯ (ಒಂದು ಜಾತಿಯ ಗಿಡ)
ಅಷ್ಟಾದಶ-ಹದಿನೆಂಟು
ಅನುಭವ-ಬಾಳಿನ ನೆನಪುಗಳು
ಅರುಹು-ತಿಳಿಸು, ಬೋಧಿಸು
ಆನಿಬರು-ಅಷ್ಟುಜನರು
ಅಗಮ್ಯ-ಪ್ರವೇಶಿಸಲು ಕಷ್ಟವಾದ
ಅಷ್ಟಾಂಗಯೋಗ-ಎಂಟುಬಗೆಯ ಯೋಗಗಳು (ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ)
ಅಧ್ವರ-ಯಜ್ಞ, ಯಾಗ
ಅದ್ರಿ-ಬೆಟ್ಟ, ಪರ್ವತ
ಅಳ್ಕಿರಿವ-ಭಯಪಡಿಸುವ
ಅನುಸಂಧಾನ-ಉಪಾಯ
ಅರ್ಧನಾರೀಶ್ವರ-ಶಿವ (ಅರ್ಧಶರೀರ ಪುರುಷ, ಅರ್ಧದೇಹ ಸ್ತ್ರೀರೂಪದ ಶಿವನ ಲೀಲೆ)
ಅಗಡ-ದುಷ್ಟ, ಕೆಟ್ಟವ
ಅಂತಕ-ಯಮ, ಮೃತ್ಯು
ಅಂಘ್ರಿಯುಗ-ಎರಡು ಪಾದಗಳು
ಅಂಧಕ-ಕುರುಡ (ಒಬ್ಬ ರಾಕ್ಷಸ)
ಅಂಬುಧಿ-ಸಮುದ್ರ (ಅಂಬು-ನೀರು, ಧಿ-ನಿಲ್ಲುವ ಸ್ಥಳ)
ಅಂತಃಕರಣ-ಬುದ್ಧಿ, ಚಿತ್ತ, ಅಹಂಕಾರ, ಮನಸ್ಸು ಎಂಬ ನಾಲ್ಕು
ಅಭ್ಯುದಯ-ಏಳಿಗೆ
ಅವಿರಳ-ದಟ್ಟವಾದ
ಅಕ್ಕುಳಿಸು-ಭಯಪಡು, ಆಕಳಿಸು
ಆಗಮಗಳು-ತಂತ್ರಗಳು, (ಕಾಮಿಕ, ವಾತುಲ ಮೊದಲಾದುವು)
ಆತುಮಲಿಂಗ-ಪ್ರಾಣಲಿಂಗ (ಹೃದಯ ಕಮಲದಲ್ಲಿರುವ ಜ್ಯೋತಿ)
ಆತ್ಮಜ-ಮಗ (ಆತ್ಮ-ತನ್ನಲ್ಲಿ, ಜ-ಹುಟ್ಟಿದವನು)

೨

ಅನಂಬಾಷ್ಪ-ಕಣ್ಣಿನ ಕಡೆಯಲ್ಲಿ ಬರುವ ಸುಖದ ನೀರು
ಅಚ್ಛಾದಕ-ಮುಚ್ಚುವುದು
ಆದಿ-ಮೊದಲು
ಇಷ್ಟಿ-ಯಾಗ
ಇಳೆ-ಭೂಮಿ
ಇಂದ್ರಿಯ-ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ ಎಂಬಿವು ಐದು
ಇಂದ್ರಜಾಲ-ಮೋಸ, ತೋರಿಕೆ
ಈಶಕವಿ-ಶಿವಕವಿ (ಶಿವನನ್ನೂ ಶಿವಶರಣರನ್ನೂ ಮಾತ್ರ ಹೊಗಳುವವನು)
ಉಜ್ವಲಿಸು-ಪ್ರಕಾಶಿಸು
ಉತ್ತುಂಗ-ಶ್ರೇಷ್ಠವಾದ
ಉಪಮಾನ-ಹೋಲಿಕೆ
ಉದ್ದಂಡ-ವೀರಭದ್ರ
ಋಷಿಗಳು-ಜ್ಞಾನಿಗಳು
ಏಳಿಸು-ತಿರಸ್ಕರಿಸು
ಐವಡಿ-ಐದರಷ್ಟು ಹೆಚ್ಚು
ಒಲಿದು-ಪ್ರೀತಿಸಿ
ಒಬ್ಬುಳಿ-ಸಮೂಹ
ಒರೆದ-ಹೇಳಿದ
ಒಡಬಟ್ಟು-ಒಪ್ಪಿಕೊಂಡು
ಒಡಬಡಿಸಿ-ಸಮ್ಮತಿಸಿ
ಓವುಗೆ-ಕಾಪಾಡಲಿ, ರಕ್ಷಿಸಲಿ
ಓತು-ಪ್ರೀತಿಸಿ
ಓರಣ-ಕ್ರಮ
ಕರಣಗಳು-ಅಂತಃಕರಣಗಳು
ಕರಿಮುಖ-ಗಣಪತಿ (ಕರಿ-ಆನೆಯ, ಮುಖ-ಮೋರೆ ಉಳ್ಳವನು)
ಕಟಾಹ-ದೊಡ್ಡಪಾತ್ರೆ
ಕಡೆಗೂಡದು-ಕೊನೆಗೊಳ್ಳದುದು
ಕಮಲೋದ್ಭವ-ಬ್ರಹ್ಮ (ಕಮಲ-ತಾವರೆಯಲ್ಲಿ, ಉದ್ಭವ-ಹುಟ್ಟಿದವ)
ಕೆಕ್ಕರಿಸು- ಕೋಪಗೊಂಡು
ಕೌಳಿಗರು_ಮೋಸಗಾರರು
ಕಮಲಸಖ-ನೇಸರ್ (ಕಮಲ-ತಾವರೆ, ಸಖ-ಸ್ನೇಹಿತ ಸೂರ್ಯ)
ಕರುಬುತನ-ಹೊಟ್ಟೆಕಿಚ್ಚು,
ಕಾರಣಿಕ-ಮಹಾತ್ಮ, ಪವಾಡಪುರುಷ
ಕಾಮ್ಯಕ-ಒಂದು ಅರಣ್ಯ
ಕಾತ್ಯಾಯಿನಿ-ಪಾರ್ವತೀದೇವಿ

ಕೌಶಲ-ಜಾಣತನ
ಕ್ರೀಡಿಸು-ವಿನೋದಿಸು
ಕಿರಾತ-ಬೇಡ, ಪುಳಿಂದ
ಕೊನೆ-ಕಡೆಯಭಾಗ, ತುತ್ತತುದಿ (ಹಳ್ಳ)
ಕುರುಹು-ಗುರುತು
ಕುಂಡದಲಿ-ನರಕದಲ್ಲಿ
ಕೃತಿ-ಕಾವ್ಯ, ಕಬ್ಬ
ಕೃಷ್ಣಮೃಗ-ಜಿಂಕೆ, ಎರಳೆ
ಕೃಪಾಬ್ಧಿ-ಕರುಣೆಯ ಸಮುದ್ರ
ಕೇಳೀವನ-ಉಪವನ, ವಿಹಾರಸ್ಥಳ
ಗಣಾಂಬುನಿಧಿ-ಗಣಂಗಳ ಸಮೂಹ (ಗಣ-ಪ್ರಮಥರ, ಅಂಬುಧಿ-ಸಮುದ್ರ)
ಗರುತ್ಮ-ಗರುಡ (ವಿಷ್ಣುವಿನ ವಾಹನ)
ಗರುವ-ಹಿರಿಯ, ಪೂಜ್ಯ
ಘಲ್ಲಣೆ-ತೊಡಕು, ಹಿಂಸೆ
ಗಾತ್ರ-ಶರೀರ, ದೇಹ
ಗಡ-ಆಶ್ಚರ್ಯಸೂಚಕ (ಅವ್ಯಯ)
ಚಂದ್ರಜೂಟ-ಶಿವ (ಚಂದ್ರ-ತಿಂಗಳನ್ನು, ಜೂಟ-ತಲೆಯಲ್ಲಿ ಧರಿಸಿದವನು)
ಚತುಸ್ಸಾಧನ-ನಾಲ್ಕುಸಾಧನೆಗಳು (ನಿತ್ಯಾನಿತ್ಯ ವಸ್ತುವಿವೇಕ, ಇಹಾಮುತ್ರಾರ್ಥ ಫಲಭೋಗ ವಿರಾಗ, ಶಮಾದಿಷಟ್ಕ ಸಂಪತ್ತಿ, ಮುಮುಕ್ಷುತಾ)
ಛಳಿಸು. ಮಾಡು
ಚಿತ್ರ-ಆಶ್ಚರ್ಯ, (ಪಟ)
ಚಿದ್ಭರಿತ-ಜ್ಞಾನದಿಂದ ಕೂಡಿದವ
ಜಲುಮ-ಜನ್ಮ, ಹುಟ್ಟುವುದು
ಜಡ-ಅಜ್ಞಾನ, ನೀರು
ಜಂಗಮ-ಪೂಜ್ಯ, ಅತಿಥಿ
ಜರಿ-ತಿರಸ್ಕರಿಸು
ಜೀವರು-ಪ್ರಾಣಿಗಳು (ಮಾಯೆಯಿಂದ ಕೂಡಿದವರು)
ಜೇವಡೆ-ಬಿಲ್ಲಿನ ಹಗ್ಗವನ್ನು ಮೀಟುವುದು
ತಪ್ಪಲು-ಬೆಟ್ಟದಬುಡ, ಸಾನುಪ್ರದೇಶ
ತಮಿಸ್ರ-ಕತ್ತಲೆ
ತನುತ್ರಯ-ಮೂರುದೇಹ (ಸ್ಥೂಲ, ಸೂಕ್ಷ್ಮ, ಕಾರಣ, ಅಥವಾ ತ್ಯಾಗಾಂಗ, ಭೋಗಾಂಗ, ಯೋಗಾಂಗ)
ತಣಿ-ತೃಪ್ತಿಪಡು
ತಾಮರಸ-ಕಮಲ
ತಾಮಸರು-ಅಜ್ಞಾನಿಗಳು

ತಾರಕಾಂತಕ.-ಷಣ್ಮುಖಸ್ವಾಮಿ (ತಾರಕಎಂಬ ರಾಕ್ಷಸನನ್ನು ಕೊಂದವನು)
ತೀವಿದ_ತುಂಬಿದ
ತಿಗುರಿ-ಕುಂಬಾರನ ಚಕ್ರ, ಸುಳಿ
ದನುಜ-ರಾಕ್ಷಸ, ಕ್ರೂರಕಾರ್ಯಗಳನ್ನು ಮಾಡುವವ
ದುಃಖಚ್ಛೇದಿ_ವ್ಯಸನವನ್ನು ಪರಿಹರಿಸುವವನು
ದಕ್ಷಾಧ್ವರ_ದಕ್ಷನಯಾಗ (ಶಿವನಿಲ್ಲದ ಯಾಗ)
ಧರಾಂಗನೆ. ಭೂಮಿದೇವಿ
ದಿವಿಜ-ದೇವತೆ (ದಿವಿ_ಸ್ವರ್ಗದಲ್ಲಿ, ಜ-ಹುಟ್ಟಿದವ)
ದಿಕ್ಪಾಲಕರು-ಎಂಟು ದಿಕ್ಕುಗಳನ್ನು ಕಾಯುವವರು (ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ, ಈಶಾನ, ನಿರುತಿ)
ದೀರ್ಘಸತ್ರ_ಒಂದು ಯಾಗದ ಹೆಸರು
ದ್ರಾಕ್ಷಾಪಾಕ_ಸುಲಭಶೈಲಿ
ದೀಕ್ಷಾ_ಒಂದು ಸಂಸ್ಕಾರ(ಜೀವನನ್ನು ಪರಿಶುದ್ಧ ಮಾಡತಕ್ಕುದು)
ದಿನಪ-ಸೂರ್ಯ (ದಿನ-ಹಗಲಿನ, ಪ-ಯಜಮಾನ)
ದಿವಿಜ ಗಿವಿಜರು_ದೇವತೆಗಳೇ ಮೊದಲಾದವರು
ಧಾಮ_ಮನೆ, ಆಶ್ರಯಸ್ಥಳ
ಧೂಳಕ್ಷರ_ಮೊದಲು ಕಲಿಯುವ ಅಕ್ಷರಗಳು
ಧ್ಯುಮಣಿ_ಸೂರ್ಯ (ದ್ಯು_ಆಕಾಶಕ್ಕೆ, ಮಣಿ_ರತ್ನಪ್ರಾಯನು)
ದಶಪುರಾಣ_ಹತ್ತು ಶಿವಪುರಾಣಗಳು
ದೃಷ್ಟ-ನಿದರ್ಶನ, ಪವಾಡ
ನದಿ. ಹೊಳೆ
ನಭ-ಆಕಾಶ
ನಾಗೇಂದ್ರ. ಆದಿಶೇಷ (ನಾಗ_ಸರ್ಪಗಳ, ಇಂದ್ರ_ಒಡೆಯ)
ನಿರೂಪ-ಅಪ್ಪಣೆ
ನಿಸ್ಸೀಮ-ಮೇರೆಯಿಲ್ಲದ
ನಿರತಿಶಯ-ಅದಕ್ಕಿಂತಲೂ ಹೆಚ್ಚಿಲ್ಲದ
ನಿರ್ಜರ-ದೇವತೆ (ಮುಪ್ಪಿಲ್ಲದವ)
ನಿಷ್ಠೆ_ನೇಮ, ಶ್ರದ್ಧೆ
ನಿರಾಮಯ_ರೋಗವಿಲ್ಲದ
ನಿತ್ಯನೈಮಿತ್ತಿಕ-ದಿನವೂ ಮಾಡತಕ್ಕ ಕರ್ಮಗಳು ನಿತ್ಯ, ವಿಶೇಷ ಪ್ರಸಂಗಗಳಲ್ಲಿ ಮಾಡತಕ್ಕವು ನೈಮಿತ್ತಿಕ
ನಿರ್ಮಲಗಂಗಾ_ದೇವಗಂಗಾನದಿ
ನಾಂದಿ-ಗ್ರಂಥದ ಮೊದಲನೇ ಪದ್ಯ
ನೈಮಿಷ_ಗಂಗಾತೀರದ ಒಂದು ಕಾಡು
ನೆಗಪು_ಎತ್ತು

ಪಲ್ಲವ_ಚಿಗುರು (ಒಂದು ರಾಜವಂಶ)
ಪರಮೇಷ್ಠಿ-ಬ್ರಹ್ಮ (ಬೊಮ್ಮ)
ಪೀಯೂಷ_ಹಾಲು, ಅಮೃತ, ಸುಧಾ
ಪ್ರಸರ-ಸಮೂಹ, ಗುಂಪು
ಪಾಪಕ್ಷಾಲಿಕ_ದುರಿತವನ್ನು ತೊಳೆಯುವವನು
ಪರಿವೇಷ-ಸೂರ್ಯ ಚಂದ್ರರ ಸುತ್ತಲೂ ಒಮ್ಮೊಮ್ಮೆ ಕಂಡುಬರುವ ವೃತ್ತಾಕಾರದ ಪ್ರಕಾಶ
ಪ್ರೇತ-ಪಿಶಾಚ, ನರಕದಲ್ಲಿನ ಜೀವ
ಪುರಹರ_ಶಿವ, ತ್ರಿಪುರಗಳನ್ನು ಸುಟ್ಟವನು
ಪಂಚಭೂತ-ಮಣ್ಣು, ನೀರು, ಗಾಳಿ, ಬೆಂಕಿ, ಆಕಾಶ
ಪದವಿ ಗಿದವಿ_ಅಧಿಕಾರ ಮೊದಲಾದುವು
ಪಾಶ-ಹಗ್ಗ (ಮಾಯೆ)
ಪುರಾತನರು-ಹಿಂದಿನಕಾಲದ ಶರಣರು
ಪ್ರಭುಸಮ್ಮಿತ_ರಾಜರ ಅಪ್ಪಣೆಯಂತೆ ಮಾನ್ಯವಾದ ಶಾಸ್ತ್ರದ ಆಜ್ಞೆಗಳು
ಪಂಚತ್ವ-ಮರಣ
ಪಂಚವಿಂಶತಿ_ಇಪ್ಪತ್ತೈದು
ಬಿಸಿಲುದೊರೆ_ಮರೀಚಿಕಾ
ಭವ_ಹುಟ್ಟು ಸಾವು
ಭೂತನಾಥ-ಶಿವನು
ಬಳ್ಳಿವರಿ-ಸುತ್ತುವರಿ
ಬೋಳೈಸು-ಸಂತೈಸು, ಸಮಾಧಾನಮಾಡು
ಬೇಂಟೆ_ಶಿಕಾರಿ
ಬೆಂಗೊಂಡು_ಬೆನ್ನುಹತ್ತಿ
ಬಿಜಯಂಗೈಸಿ_ಕರೆತಂದು
ಭಾಳಾಂಬಕ-ಶಿವ (ಭಾಳ-ಹಣೆಯಲ್ಲಿ, ಅಂಬಕ-ಕಣ್ಣುಳ್ಳವ)
ಭೂರಿದುರಿತ_ಹೆಚ್ಚುಪಾಪ
ಭವ್ಯಕಾಯ_ಬಲವಾದ ದೇಹ
ಬಿಗುಹು-ಬಿಮ್ಮು, ಅಹಂಕಾರ
ಭವಾನಿ-ಪಾರ್ವತಿ (ಒಂದುನದಿ)
ಬೆಳ್ಳುಡಿ-ತಿಳಿಯದವರ ಮಾತು
ಬಲ್ಲಾಳರು-ಹಳೇಬೀಡಿನ ರಾಜರು
ಭಾನುಸುತ-ಸೂರ್ಯನ ಮಗ (ವೈವಸ್ವತ)
ಬಾದರಾಯಣ-ವೇದವ್ಯಾಸ
ಭವವಹ್ನಿದಗ್ಧರು_ಸಂಸಾರವೆಂಬ ಬೆಂಕಿಯಲ್ಲಿ ಸುಟ್ಟವರು
ಭಾರತವರ್ಷ-ಹಿಂದೂಸ್ಥಾನ
ಮನುಪಟ್ಟ-ಮನುಷ್ಯಜಾತಿಯ ಯಜಮಾನ ಪದವಿ

ಮದನಹರ-ಶಿವ (ಮದನ-ಕಾಮ, ಹರ-ಸುಟ್ಟವ)
ಮೊಟ್ಟೆ-ಚೀಲ, ಗಂಟು
ಮುಕುಟ-ಕಿರೀಟ
ಮಹಾಶ್ರುತಿಶಿರ-ಉಪನಿಷತ್ತುಗಳು
ಮಖ-ಯಜ್ಞ
ಮುಖಾಬ್ಜ-ಮೊಗದಾವರೆ
ಮಂಡಿಕೆ-ಕಾಲುಕಡಗ
ಮಂತ್ರ-ಪವಿತ್ರವಾದ ಅಕ್ಷರಗಳ ಸಮೂಹ (ಮನನಾತ್ ತ್ರಾಯತ ಇತಿ ಮಂತ್ರಃ)
ಮಂತ್ರಪಿಂಡ-ಶುದ್ಧವಾದ ಜೀವ
ಮುಕ್ತಿ-ದುಃಖದಿಂದ ದೂರವಾಗುವ ಮೋಕ್ಷ
ಮುನೀಂದ್ರ-ಹಿರಿಯ ರುಷಿ (ಮುನಿ-ಋಷಿ, ಇಂದ್ರ-ಒಡೆಯ)
ಮೂಢಮಾನವರು-ದಡ್ಡರು, ಗಾಂಪರು
ಮತ್ತಕಾಶಿನಿ-ಸ್ತ್ರೀ, ಹೆಣ್ಣು
ಮೈತ್ರಾವರುಣಿಯಷ್ಟಿ-ಮೈತ್ರಾವರುಣಿ ಎಂಬ ಯಾಗ
ಮುಖೋದ್ಭವರು-ಪ್ರಮಥರು, ಅಯೋನಿಜರು (ಶ್ರೀ ರೇಣುಕಾದಿಗಳು)
ರವಿಕಾಂತ-ಸೂರ್ಯಕಾಂತ ಶಿಲೆ
ರಾಜೇಂದ್ರ-ಚಕ್ರವರ್ತಿ (ರಾಜ-ಅರಸರ, ಇಂದ್ರ-ಒಡೆಯ)
ರಜತಾದ್ರಿ-ಬೆಳ್ಳಿಯ ಬೆಟ್ಟ
ಲಕ್ಷ್ಮೀಲೋಲ-ನಾರಾಯಣ
ವಸ್ತುನಿರ್ದೇಶ-ಪದಾರ್ಥದ ಗುರುತು ಹಚ್ಚುವುದು
ವಿರಿಂಚಿ-ಬ್ರಹ್ಮ, ಸೃಷ್ಟಿಕರ್ತ
ವಾಕ್‌ಪುಷ್ಪ-ಮಾತೆಂಬ ಹೂ
ವಾಣೀ-ಸರಸ್ವತಿ, ನುಡಿವೆಣ್ಣು
ವಹ್ನಿ-ಬೆಂಕಿ, ಅಗ್ನಿ
ವಾರಣಾಶಿ-ಕಾಶೀಕ್ಷೇತ್ರ
ವಾರಣಾಸ್ಯ-ಗಣಪತಿ (ವಾರಣ-ಆನೆ, ಆಸ್ಯ-ಮುಖ)
ವೇದ-ಪಳೆಮಾತು, ಋಗ್, ಯಜುರ್, ಸಾಮ, ಅಥರ್ವಣ ಎಂಬ ನಾಲ್ಕು
ವರ್ಣ-ಅಕ್ಷರ (ಬಣ್ಣ)
ವಲ್ಲಭೆ-ಹೆಂಡತಿ
ವಿಶ್ವನಾಥ-ಶಿವ (ವಿಶ್ವ-ಪ್ರಪಂಚ, ನಾಥ-ಒಡೆಯ)
ವೇದಾಂತ-ವೇದಗಳ ಕಡೆಯಲ್ಲಿರುವ ಉಪನಿಷತ್‌ಗಳು
ವಿದಿತ-ಪ್ರಸಿದ್ಧವಾದ
ವಿಧಿ-ಬ್ರಹ್ಮ, ಹಣೆಯಬರೆಹ
ವರ್ಧಕ-ಏಳಿಗೆಗೆ ತರತಕ್ಕ
ವಿತಾನ-ಸಮೂಹ, ಗುಂಪು

ವಾಙ್ಮನ-ಮಾತು ಮನಸ್ಸು (ವಾಕ್-ಮನ-ವಾಙ್ಮನ)
ವೇದಶಿರ-ಉಪನಿಷತ್
ಶಕ್ರ-ಇಂದ್ರ (ಮೂರು ಲೋಕದ ಒಡೆಯ)
ಶರಣಾಗು-ಮರೆಹೊಗು
ಶಿವಕಾವ್ಯ-ಶಿವನನ್ನೂ ಶಿವಶರಣರನ್ನೂ ಸ್ತುತಿಸುವ ಗ್ರಂಥಗಳು
ಶೃಂಗಪುರ-ಶೃಂಗೇರಿ (ಶಂಕರಾಚಾರ್ಯರ ಶಾರದಾ ಪೀಠವಿರುವ ಸ್ಥಳ)
ಶಬ್ದಾರ್ಥ-ಮಾತು ಮತ್ತು ವಸ್ತು
ಶಬ್ದಮಣಿ-ವ್ಯಾಕರಣ ಶಾಸ್ತ್ರವನ್ನು ಬೋಧಿಸುವ ಒಂದು ಗ್ರಂಥ (ಶಬ್ದಮಣಿ ದರ್ಪಣ)
ಶ್ರುತಿ-ವೇದ, ಹಳೆಮಾತು
ಷಟ್‌ಪದಿ-ಆರು ಪಾದವುಳ್ಳ ಪದ್ಯ (ತುಂಬಿ)
ಸವಿ-ರುಚಿ, ಮಾಧುರ್ಯ
ಸ್ಥಾವರ-ಬಿದ್ದಲ್ಲೇ ಬಿದ್ದಿರುವ ಪದಾರ್ಥ (ಜಂಗಮವಲ್ಲದುದು)
ಸಜ್ಜನ-ಒಳ್ಳೆಯವ
ಸುರಮುನಿ-ನಾರದ
ಸ್ವಾನುಭಾವ-ತನ್ನದೇ ಆದ ತಿಳಿವು
ಸಸಿನೆ-ಚೆನ್ನಾಗಿ
ಸೂರಿ ಜನಂಗಳು-ವಿದ್ವಾಂಸರು
ಸಾಂದ್ರ-ಸಮೂಹ, ಗುಂಪು
ಸಿರಿವಂತ-ಐಶ್ವರ್ಯವುಳ್ಳವ
ಸೋಮಪಾನ-ವೇದಕಾಲದಲ್ಲಿನ ಮಾದಕದ್ರವ್ಯ
ಸರಿವುತ-ಓಡುತ್ತಾ
ಸಿರಿವೆಣ್ಣು-ಲಕ್ಷ್ಮೀದೇವಿ
ಸುಖಸಿಂಧು-ಆನಂದದ ಸಮುದ್ರ
ಸವರು-ನಾಶಮಾಡು
ಸೋಮ-ಶಿವ (ಸಾ-ಉಮಾ-ಸೋಮ) ಪಾರ್ವತಿಯಿಂದ ಕೂಡಿದವ
ಸೆಳೆಗುಡುಹಿ-ಹೆಂಡಕುಡುಕ
ಹದನು-ಕಾರಣ
ಹಸಾದ-ಅಪ್ಪಣೆ
ಹಮ್ಮು-ಅಹಂಕಾರ (ನಾನೆಂಬ ಭ್ರಾಂತಿ)
ಹಾಡುಗಬ್ಬ-ರಾಗ ತಾಳಗಳಿಂದ ಹಾಡಲು ಅನುಕೂಲವಾದ ಪದ್ಯಕಾವ್ಯ
ಹಾರುತ-ನಿರೀಕ್ಷಿಸುತ್ತ
ಹುಲುಕ-ಅಲ್ಪ ಮನುಷ್ಯ
ಹೊರಗೆಳೆ- ತಿರಸ್ಕರಿಸು
ಕ್ಷುಧೆ-ಹಸಿವು

—:★:—

# ಅಚ್ಚಿನ ತಪ್ಪು-ಒಪ್ಪುಗಳು

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| ೧ | ೩ | ನಾರಾಯಣ | ನಾರಯಣ |
| ೨ | ೮ | ಪರಮೇಷ್ಟ್ಯವಳಿ | ಪರಮೇಷ್ಠ್ಯವಳಿ |
| ೩ | ೧೦ | ಅಗಸ್ತ್ಯನರುಹಿದ | ಅಗಸ್ತ್ಯಗರುಹಿದ |
| | ೧೧ | ಕೊಡುಗೆಮುನೀಶ | ಕೊಡುಗೆಮುಗೀಶ |
| | ೧೨ | ಶೋಜೋ | ತೇಜೋ |
| | | ದಾರುಕರ | ದಾರುಕ |
| | ೧೪ | ಮುಕ್ತಿಯು | ಮುಕ್ತಿಯು |
| ೪ | ೧೫ | ಷ್ಕಾಲಕನು | ಕ್ಷಾಲಕನು |
| | ೧೯ | ಕಾಯ್ವಮುರ | ಕಾಯ್ವಮುರ |
| | | ರಕ್ಷಕಕ | ರಕ್ಷಕ |
| ೫ | ೨೨ | ನಾಗೇಂದ್ರ | ನಾ\|ಗೇಂದ್ರ |
| | ೨೩ | ಶಿವನೆಮುನೀಗೆ | ಶಿವನೆಮುಗೀಗೆ |
| | ೨೪ | ಭಕ್ತಿಶಂಭು | ಶಂಭುಭಕ್ತಿ |
| ೬ | ೨೮ | ಮುಹಾಂಧಕಾರವ | ಮೂಹಾಂಧಕಾರವ |
| ೭ | ೩೦ | ಧರೆಗುರುಹಿದಾ | ಧರೆಗರುಹಿದಾ |
| | ೩೧ | ಪೌರಾತ | ಪೌರಾತನ |
| | ೩೨ | ವೈವಸ್ವತಗೆ | ವೈವಸ್ವತಗೆ |
| ೮ | ೩೫ | ದಾನಿಸುವದಿಹ | ದಾಲಿಸುವದಿಪ |
| | ೩೭ | ಯಿದರೊಳಿಸೆದರ್ಸ | ಇದರೊಳಿಸೆದಿರ್ಸ |
| | ೩೯ | ದಾತೃ | ದಾತೃ |
| ೯ | ೪೩ | (ಗದಿತ)ಸುಕೋಮಲೆಜಾಣೆ | ಗದಿತಜಾಣೆ |
| | | ॥ ೪ ॥ | ॥ ೪೩ ॥ |
| ೧೦ | ೪೫ | ಜ್ಯೋತಿ | ಜ್ಯೋತಿ |
| | ೧ | ಸೋಮುಪಾನದಿ | ಸೋಮುಪಾನದಿ |
| | ೨ | ಪರಿಹಾರ | ಪರಿ ಹಾರ |
| | ೩ | ಹುಟ್ಟಿದಂತಿದೆ | ಪುಟ್ಟದಂತಿರೆ |
| ೧೧ | ೪ | ಹುಟ್ಟಿಸಿದ | ಹುಟ್ಟಿಸಿದಿ |

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| | ೫ | ಆಧಿಕ | ಅಧಿಕ |
| | ೭ | ರುತ್ತ್ರವಾಗಿಯೆ | ರುಕ್ತ್ರವಾಗಿಯೆ |
| | ೯ | ವೈವಸ್ಪತಾಹ್ಪಯ | ವೈವಸ್ವತಾಹ್ವಯ |
| ೧೨ | ೧೩ | ಪ್ರತಿಷ್ಠಾನಾಹ್ಪಯದ | ಪ್ರತಿಷ್ಠಾನಾಹ್ವಯದ |
| ೧೩ | ೧೫ | ಯೆಶ್ಟಿಯ | ಯಷ್ಟಿಯ |
| ೧೪ | ೨೦ | ಸದ್ಯುಮ್ನ | ಸುದ್ಯುಮ್ನ |
| | | ವೈವಸ್ಪತನು | ವೈವಸ್ವತನು |
| | ೨೩ | ಸಿಕ್ಷ್ವಾಕು | ಪಿಕ್ಷ್ವಾಕು |
| ೧೫ | ೨೫ | ವೈರಾಗ್ಯದಲ್ಲಿ | ವೈರಾಗ್ಯದಲಿ |
| | ೨೬ | ಭಾಸುರಾರ್ತ | ಭಾಸುರಾರ್ಕ |
| | ೨೮ | ಮತವೇ | ಮತ ವೇ |
| | | ಭಗನವ | ಭವಭವ |
| | ೨೯ | ದಾರ\|ಹುಸಿ | \|ದಾರಹುಸಿ |
| ೧೭ | ೧ | ಕರುಣಿಸಿದನಾತ್ಮಜಕೆ | ಕರುಣಿಸಿದನಾತ್ಮಜಗೆ |
| | | ತ್ಪರನು | ಪರನು |
| | | ಚಿದಖಂಡಮೃತವ (೯) | ಚಿದಖಂಡಾಮೃತವ |
| | ೩ | ಬೆಳಗೂ\|ದಾ | ಬೆಳಗುವು\|ದಾ |
| ೧೮ | ೬ | ತೆರೆಗಳೂಲು | ತೆರೆಗಳೊಲು |
| | ೮ | ನಾಂತವೋ | ನಾಂತವೊ |
| | | ವೊಪ್ಪ ( ) | ವೊಪ್ಪ (ಲು) |
| ೧೯ | ೧೧ | ಜ್ಯೋತಿಯೇಂ | ಜ್ಯೋತಿಯೇ |
| | ೧೨ | ಯುದಕೆ | ಅದಕೆ |
| | ೧೩ | ಪದವಿಯೂ | ಪದವಿಯಾ |
| | ೧೪ | ಕದಲಿ\| | ಕಗಳಲಿ\| |
| ೨೦ | ೨ | ನಿಯುಮುಗಳ | ನಿಯಮಿಗಳ |
| | ೩ | ಕರುಣಿಸೆಂದೆರೆಗಿನಸು | ಕರುಣಿಸೆಂದೆರಗಿಡಸು |
| ೨೧ | ೫ | ವಸಕದಿಂ | ಮುಸಕದಿಂ |
| | ೭ | ಮಾವೆಂದೆಲ್ಲ | ಹಾವೆಂದಲ್ಲ |
| | ೮ | ಮನವುಳ್ಗದೀ | ಮನವುಳ್ಳಡೀ |
| ೨೨ | ೧೧ | ಸೊಪ್ಪುಗಳಿಗೊನೆವಾ | ಸೊಪ್ಪುಗಳಿನೊಗೆವಾ |

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| | ೧೨ | ದೆನೆಗೆ | ದೆನಗೆ |
| | ೧೩ | ಚ್ಛಾದಿಸಿದಳಾ | ಚ್ಛಾದಿಸಿದಳಾ |
| | | ಚ್ಛಾದಕವು | ಚ್ಛಾದಕವು |
| | | ನಭವನು।ಸ್ನೈದುವನು | ನಭವ।ಸ್ನೈದುವನು |
| ೨೩ | ೧೭ | ಯಾದಾ। | ಯಾಧಾ। |
| ೨೪ | ೨೧ | ಬ್ರಹ್ಮಾಂಡತೋಟ | ಬ್ರಹ್ಮಾಂಡಕೋಟಿ |
| | | ಮರುತು | ಮರುತ |
| | ೨೩ | ಬೇಕಾದನು | ಬೇಕದನು |
| | | ತಾನುಹನು | ತಾನಹನು |
| ೨೫ | ೨೭ | ತತ್ವದಲಿ | ತತ್ವದಲಿ |
| | | ತತ್ವವೆನಿಪ್ಪ | ತತ್ವವೆನಿಪ್ಪ |
| | | ದದಕ್ಕೈದು | ದಕ್ಕೈದು |
| | ೨೮ | ಮನಲಗು | ಮನಗಳು |
| | | ವುಳಿಸನು | ವುಳಿವನು |
| ೨೬ | ೨೯ | ಸಾಧಕವತೀಯದ | ಸಾಧಕವಲೇ ಯದ |
| | ೩೧ | ಮಯದರ್ಧಾತುರಂ | ಮಯರ।ರ್ಧಾತುರಂ |
| | | ಸಂವಿಜ್ಯೋತಿ | ಸಂವಿಜ್ಯೋತಿ |
| | ೩೩ | ಶಬ್ಧ | ಶಬ್ದ |
| ೨೭ | ೩೭ | ಔಮೆನಿಪ | ಓಮೆನಿಪ |
| | | ಹಾಮೆನಿಪ | ಹ್ರಾಮೆನಿಪ |
| | | ಶಬ್ಧಾರ್ಥ | ಶಬ್ದಾರ್ಥ |
| ೨೮ | ೪೦ | ವುಸರಿದ | ವುಸುರಿದ |
| | ೪೩ | ಸ।ವೃದ್ಧಿಯನು | ಸ।ಮೃದ್ಧಿಯನು |
| | | ಪೀಯಾ।ಷಾಬ್ಧಿ | ಪೀಯೂ।ಷಾಬ್ಧಿ |
| | | ರುಖಸಂ।ಸಿದ್ಧ | ಸುಖ।ಸಿದ್ಧ |
| | ೪೪ | (ಅಚ್ಚಾಗಿಲ್ಲ) | ಆವನಾಗಲಿ ನಿಮ್ಮ ನಿಜವನು । ಹೇವ ಬಲ್ಲವರುಂಟೆ ಬ್ರಹ್ಮ । ಶ್ರೀವರಾದ್ಯರಿಗರಿದು ಮಿಕ್ಕರವಾತ ನೇಕಿನ್ನು ॥ |

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| | | | ಆವನಾಗಲಿ ಬಲ್ಲತೆರದಿಂ<br>ಭಾವಿಸಿದರೊಡಬಡುವಿರೆಂಬೀ \|<br>ಭಾವದಲಿ ಹೇಳಿದೆನು ಶಿವತತ್ವಾರ್ಥ<br>ಸಂಗತಿಯ ॥೪೪॥<br>ಇಂತು ನಾಲ್ಕನೆಯ ಸಂಧಿ ಮುಗಿದುದು.<br>(ಶರಣ ಸಾಹಿತ್ಯ ಸಂ. ೧೩–೨. ಪುಟ ೧೧೧ ನೋಡಿ) |
| ೨೯ | ೨ | ಗೂಟದಗಲಿ | ಗೂಟದಲಿ |
| ೩೦ | ೭ | ಬಾಯಹಂಕೃತಿ | ಬಾ ಅಹಂಕೃತಿ |
| | | ಅದುದೀ | ಆದುದೀ |
| ೩೧ | ೧೩ | ಅದಿರುದ್ರಂ | ಆದಿರುದ್ರಂ |
| | | ನೈದ | ನೈದೆ |
| ೩೧ | ೧೪ | ಕುಣಿಸುವಸೀಶ್ವರನ | ಕುಣಿಸುವಡೀಶ್ವರನ |
| ೩೨ | ೧೭ | ಮೂಡೆ | ಮಾಡೆ |
| | | ಮೂಳ್ಪ | ಮಾಳ್ಪ |
| | ೧೮ | ಮಾಡುನ | ಮಾಡುವ |
| ೩೫ | ೧೦ | ಭೋಗಾ\|ಚ್ಯ್ಯುತರು | ಭೋಗ\|ಚ್ಯುತರು |
| ೩೭ | ೧೫ | ನಾಮವಿಹುದಸು | ನಾಮವಿಹುದಘ |
| ೩೮ | ೧ | ಬರುವಿನ | ಬರವಿನ |
| ೪೦ | ೧೦ | ಭಂಗಂಪಡೆದು | ಭಂಗಂಬಡೆದು |
| | ೧೨ | ತನ್ನವರಿಗೀವ್ರತ | ತನ್ನವರಿಗೀವ್ರತ |
| ೪೩ | ೬ | ಕಶ್ಚಿಥರ್ಮ | ಕಶ್ಚಿದ್ಧರ್ಮ |
| | ೭ | ಹೊರೆಕಿದ | ದೊರಕಿದ |
| | ೯ | ಹಾವಲ್ಯಂಗ | ಥಾವಳ್ಯಾಂಗ |
| ೪೪ | ೩ | ತುರುಹರಿಯೆ | ಕುರುಹರಿಯೆ |
| ೪೫ | ೩ | ಸಮ್ಯಜ್ಞಾನ | ಸಮ್ಯಗ್ಜ್ಞಾನ |
| ೪೭ | ೮ | ಹಿಂಗವುದು | ಹಿಂಗುವುದು |
| ೪೮ | ೧ | ಯೆನ್ನುತ್ತ್ರೆರಗಿದನು | ಯೆನುತ್ತೆರಗಿದನು |
| ೫೦ | ೯ | ಯೋಗೀಶ್ವರನ | ಯೋಗೀ\|ಶ್ವರನ |
| ೫೩ | ೧೦ | ಬಲಿಮ | ಬಲಿದುಕೆ |

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| | | ಭಕತಾ | ಭಕುತಾ |
| ೫೭ | ೩ | ಅಳಿವಿ | ಅಳಿವ |
| ೫೮ | ೯ | ತನವ | ತನುವ |
| ೫೯ | ೧ | ವಿಶೇಶ್ವರನು | ವಿಶ್ವೇಶ್ವರನು |
| | ೩ | ರರುಹುವ | ರುರುಹುವ |
| | ೪ | ವಾದ್ಯದುದ್ಧ | ವಾದ್ಯದುದ್ಘನದ |
| | | ಜೋದ್ವವಾಂಡನ | ಜೋಢ್ಭವಾಂಡದ. |
| ೬೦ | ೫ | ಪಾಹಕರು | ಪಾತಕರು |
| | ೬ | ರೋಮಗರಳಿ | ರೋಮಗಳರಳಿ |
| ೬೧ | ೯ | ಗಿರಿಶರ್ಗರ್ಪಿಸು | ಗಿರಿಶಗರ್ಪಿಸು |
| ೬೨ | ೧೫ | ವಿರೇಶ | ವೀರೇಶ |
| ೬೩ | ೧ | ಭವಿಷ್ಯರು\|ಕ | ಭವಿಷ್ಯ |
| | ೨ | ಫಲಗಳಹುವಿಂಡ | ಫಲಗಳಹವೆಂದ |
| ೬೬ | ೧೫ | ಗರುವಗೊಂದಿಸಿತು | ಆಗೊರವಗೊಂದಿಸಿತು. |
| ೬೭ | ೨ | ಕೊಳ್ಳುತ್ತಿಹ | ಕೊಳುತ್ತಿಹ |
| ೬೮ | ೮ | ವಧಿಸಬಾರದು | ವದಿಸಬಾರದು |
| | ೯ | ಸೀಗುವಡೆ | ನೀಗುವಡೆ |

—:★:—

## ಶರಣ ಸಾಹಿತ್ಯ ಗ್ರಂಥಮಾಲೆಯು

### ಪ್ರಕಟನೆಗಳು

| | | | |
|---|---|---|---|
| ೧. | ಪುರಾತನರ ತ್ರಿವಿಧಿ (ನಿಜಗುಣ ಶಿವಯೋಗಿ) | | |
| ೨. | ವೀರೇಶ ಚರಿತೆ (ರಾಘವಾಂಕ ಕವಿ) | | ೨-೦-೦ |
| ೩. | ಮನೋವಿಜಯಮ್ (ಗುರುಬಸವ ಕವಿ) | | ೨-೦-೧ |
| ೪. | ಬಸವೋದಾಹರಣಮ್ (ಪಾಲ್ಕುರಿಕೆ ಸೋಮನಾಥ) | | ೧-೦-೦ |
| ೫. | ಘನಲಿಂಗಿದೇವರ ವಚನ (ಘನಲಿಂಗಿದೇವರು) | | ೧-೦-೮ |
| ೬. | ತುರುಗಾಹಿ ರಾಮಣ್ಣ ವಚನ (ರಾಮಣ್ಣ) | | ೦-೪-೦ |
| ೭. | ಬಿಲ್ವಾಷ್ಟೋತ್ತರಮ್ | | ೦-೪-೦ |
| ೮. | ಸಂಕ್ಷಿಪ್ತ ಶಿವಪೂಜಾವಿಧಿ | (ಉತ್ತಮ ಪ್ರತಿ) | ೧-೦-೦ |
| | | (ಸಾಮಾನ್ಯ ಪ್ರತಿ) | ೦-೮-೦ |
| ೯. | ಯುಗವಾಣಿ (ಗದ್ಯ_ಪದ್ಯ ಸಂಗ್ರಹ) | | ೧-೦-೦ |
| ೧೦. | ಭಾರತ_ಚೀಣಾಗಳಲ್ಲಿ ಜನಜೀವನ | | ೦ ೮.೦ |
| ೧೧. | ನ್ಯಾಯ ಶತಕಮ್ (ರಾಮೇಶ್ವರಮುನಿ) | | ೦-೧೨-೦ |
| ೧೨. | ಕನ್ನಡಕಲಿ ಸಿರುಮನ ಚರಿತೆ | | ೦-೧೨.೧ |

## ವಿದ್ಯಾರ್ಥಿ ಗ್ರಂಥಮಾಲೆಯು

### ಪ್ರಕಟನೆಗಳು

| | | | |
|---|---|---|---|
| ೧. | ಗಾಂಧಿ_ಗೀತೆಗಳು (ಕವನ ಸಂಗ್ರಹ) | | ೦-೪-೦ |
| ೨. | ಸರ್ವಜ್ಞ ಮೂರ್ತಿ (ಕವಿ_ಕಾವ್ಯ ವಿಮರ್ಶೆ) | (ಉತ್ತಮ ಪ್ರತಿ) | ೧-೪-೦ |
| | | (ಸಾಮಾನ್ಯ ಪ್ರತಿ) | ೧-೦-೦ |
| ೩. | ರಮಣ ಮಹರ್ಷಿ (ಜೀವನ ಚರಿತ್ರೆ) | (ಉತ್ತಮ ಪ್ರತಿ) | ೧.೪-೦ |
| | | (ಸಾಮಾನ್ಯ ಪ್ರತಿ) | ೧-೦-೦ |